

# ಹಿಂಗಾರ



ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ–3 ಸಂಚಿಕೆ–10 ದಿನಾಂಕ : 30.06.2019 ಕೊಡಗು ರೂ. 20/–

ಏಪ್ರಿಲ್–ಮೇ–ಜೂನ್
2019

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ












3-2-2019 ರಂದ್ ಗೌಡ ಸಮುದಾಯ ಭವನ, ಕೊಡಿಯಾಲ್ ಬಯಲ್, ಸುಳ್ಯಲಿ ನಡ್ದ ಅರೆಭಾಷೆ ಸುರೂನ ಸಾಹಿತ್ಯ ಸಮ್ಮೇಳನದ ಒಂದು ನೋಟ

**"HINGARA"** A quarterly on Arebashe Language, Litereature and Culture, Published by 'Karnataka Arebashe Samskruthi Mathu Sahithya Academy' Madikeri - 571201

ಪ್ರಕಟಣೆ : ಏಪ್ರಿಲ್-ಮೇ-ಜೂನ್ - 2019

ಪುಟಗಳು : viii + 74.

ಬೆಲೆ : ರೂ. 20/-

ಮುಖಪುಟ ಚಿತ್ರ : ತಾಳತ್‌ಮನೆ ಎಂಬಲ್ಲಿಂದ ಕಾಣುವ ಉಡೊತ್ತ್ ಬೆಟ್ಟ

ಫೋಟೋ- ಬಾರಿಯಂಡ ಜೋಯಪ್ಪ



ಪ್ರಕಟಣೆ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ಪುಸ್ತಕ ಸಿಗುವ ಸ್ಥಳ :

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**

'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,

ಮಡಿಕೇರಿ, ಕೊಡಗು ಜಿಲ್ಲೆ.

ದೂರವಾಣಿ ಸಂಖ್ಯೆ : 08272-223055

ಮುದ್ರಕರು:

**ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,**

ಪೂಜಾ ಆರ್ಕೇಡ್,

ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.

Ph. 08272-224919, 9448135592



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

**ಪಿ.ಸಿ. ಜಯರಾಮ**

ಸಂಪಾದಕರ್

**ಬಾರಿಯಂಡ ಜೋಯಪ್ಪ**

ಪ್ರಕಾಶಕರ್

**ಚಂದ್ರಹಾಸ ರೈ ಬಿ.**



# ಅಧ್ಯಕ್ಷರ ನುಡಿ



ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಏಪ್ರಿಲ್, ಮೇ ತಿಂಗಳ್‌ಲಿ ಲೋಕಸಭಾ ಚುನಾವಣೆ ಹಿನ್ನೆಲೆಲಿ ಕಾರ್‍ಯಕ್ರಮ ನಡ್ಸಿತಾತ್ಲೆ.

ಇತ್ತೀಚೆಗಿನ ದಿನಲಿ ನಮ್ಮ ಹಿಂಗಾರ ಪತ್ರಿಕೆ ಓದುವವರ ಸಂಖ್ಯೆ ಜಾಸ್ತಿ ಆವುಟು. ಸುಮಾರು ಎಂಟು ನೂರು ಮನೆಗಳಿಗೆ ಈಗ ಪುಸ್ತಕ ತಲಪುತಾ ಉಟ್ಟು. ಬರೆವರ ಸಂಖ್ಯೆ ಕೂಡಾ ಹೆಚ್ಚಿಗೆ ಆವುಟು.

ಇದೀಗ ನಾವು ಅರೆಬಾಸೆನ ಸಣ್ಣ ಸಣ್ಣ ಕಥೆಗಳ ಆಡಿಯೋ ಮಾಡಿ, ಪೆನ್‌ಡ್ರೈವ್‌ಲಿ ಹಾಕಿ ಜನಗಳಿಗೆ ಕೇಳುವಾಂಗೆ ಮಾಡೊಕೂಂತ ಕೆಲ್ಸ ಮಾಡ್ತಾ ಒಳ. ಅದರ ಮಾಡುವ ಪ್ರಯತ್ನಕ್ಕೆ ಲೋಕೇಶ್ ಊರುಬೈಲು ಅವ್‌ಕ್ಕೆ ಜವಾಬ್ದಾರಿ ಕೊಟ್ಟೊಳ. ಅದ್ ಜುಲೈ ತಿಂಗ್ಳಲಿ ಬಿಡುಗಡೆ ಆದೆ.

ಮುಂದಿನ ದಿನಲಿ ಮಡಿಕೇರಿ ಆಕಾಶವಾಣಿ ಕೇಂದ್ರಲಿ ವಾರಕ್ಕೆ ಎರಡು ಸರ್ತಿ ಸುದ್ದಿ ಜೊಂಪೆನ ಒಟ್ಟಿಗೆ, ವಿಶೇಷ ಕಾರ್‍ಯಕ್ರಮಗ ಬಂದವೆ. ಅದ್ ನಮ್ಮ ಅಕಾಡೆಮಿ ಮೂಲಕನೇ ನಡ್ಸಿಕೆ ಸಹಾಯ ಮಾಡ್ವೆ. ಒಟ್ಟ್‌ಲಿ ಭಾಷೆ ಬೆಳೆಕೆ ಇನ್ನಷ್ಟು ಕಾರ್‍ಯಕ್ರಮ ಮಾಡ್ವೆ. ಮಂಗಳೂರು ಆಕಾಶವಾಣಿಲಿ ಕಾರ್ಯಕ್ರಮ ಬಾಕೆ ಪ್ರಯತ್ನ ಮಾಡ್ತಾ ಒಳೊ.

ಫೇಲೋಶಿಪ್‌ಗೆ ಆಯ್ಕೆ ಆದ ಹತ್ತ್ ಜನ ವಿದ್ವಾಂಸರ್‌ಗೆ ಬಾರಿ ಮುತುವರ್ಜಿಂದ ಕೆಲ್ಸ ಮಾಡ್ತಾ ಒಳೊ. ಬೇಗ ಫಲಿತಾಂಶ ಸಿಕ್ಕಿದೆ.

ಜುಲೈ ತಿಂಗಳಲ್ಲಿ ಮುತ್ತಾರ್‌ಮುಡಿ, ಪಂಜ, ಅಜ್ಜಾವರ, ಪುತ್ತೂರ್‌ಲಿ ಕಾರ್‍ಯಕ್ರಮಗಳ ಮಾಡಿಕೆ ಈಗಾಗಲೇ ತಯಾರಾಗೊಳೊ. ಶಾಲಾ ಕಾಲೇಜ್‌ಗಳ್‌ಲಿ ಬಾಸೆನ ಬೆಳ್ಸಿಕೆ ಕಾರ್‍ಯಕ್ರಮಗಳ ಮಾಡಿಕೆ ತಯಾರಾಗೊಳೊ.

ಆದಷ್ಟು ಅರೆಬಾಸೆ ಪುಸ್ತಕಗಳ ತಕಂಡ್ ಓದಿ, ಬರೆನಿ. ಎಲ್ಲವೂ ಸೇರಿ ಬಾಸೆಗೆ ಹೆಚ್ಚ್ ಗೌರವ ತಂದ್ ಕೊಡಾಮು.

ಪಿ.ಸಿ. ಜಯರಾಮ
ಅಧ್ಯಕ್ಷರ್

# ಸಂಪಾದಕೀಯ



ಇದ್ 'ಹಿಂಗಾರ'ದ ಹತ್ತನೇ ಸಂಚಿಕೆತ್ತೇಳಿಕೆ ಕುಸಿ ಆದೆ. ಐದ್, ಹತ್ತ್, ಇಪ್ಪತ್ತೈದ್‌ತ್ತೇಳ್ದು ಒಂದೊಂದ್ ಹಂತಗ. ಇಲ್ಲಿ ಮುಟ್ಟ ಹಿಂಗಾರ ಮುದ್ರಣ ಕಾಂಬಕೆ ನಿಮ್ಮೆಲ್ಲರ ಪ್ರೋತ್ಸಾಹವೇ ಕಾರಣ.

ಕರ್ನಾಟಕ ರಾಜ್ಯ ಸರಕಾರ, ಅಕಾಡೆಮಿನ ಅಧ್ಯಕ್ಷರ್, ರಿಜಿಸ್ಟ್ರಾರ್, ಅರ್ಥ ಸದಸ್ಯರ್, ಅಕಾಡೆಮಿನ ಸದಸ್ಯರ್, ಕಚೇರಿ ಸಿಬ್ಬಂದಿಗ, 'ಹಿಂಗಾರ'ದ ಬರಹಗಾರರ್ ಮತ್ತೆ ಚಂದಾದಾರರಿಗೆಲ್ಲವ್ಕೂ ಧನ್ಯವಾದಗ. ಇದೇ ರೀತಿನ ಸಹಕಾರನ ಹಿಂಗಾರ ಯಾಗೋಳು ಬಯ್ಸಿದೆ.

ನೀವು ಕತೆ, ಕವನ, ಲೇಖನ, ಮನೆ ಮದ್ದ್, ಹೊಸ ರುಚಿನೆಲ್ಲ ಬರ್ದ್ ಕಳ್ಸಿಕೊಡುತ್ತಿರುವಂಗೆ ಬರೆಕೂತ್ತೇಳುವ ತುಡಿತ ಇರೊವುಕೂ ಬರೆಕೆ ಹೇಳಿ. ಅದರ್ನ ಅಕಾಡೆಮಿಗೆ ಕಳ್ಸಿಕೊಡಿಕೆ ಸಲಹೆ ಕೊಡಿ. ಬರವಣಿಗೆ ಮಾತ್ರ ಅವರವರ ಸೊಂತ ಬರವಣಿಗೆನೇ ಆಗಿರ್‌ಲಿ.

ವೈಚಾರಿಕ ಲೇಖನಗ, ಪುಸ್ತಕ ವಿಮರ್ಶೆಗ, ಸಂಶೋಧನ ಲೇಖನಗ, ಪ್ರವಾಸಾನುಭವ, ಹೊಸ ಹೊಸ ಕೃಷಿ ಪದ್ಧತಿಗ, ಸಮಾಜ ಮುಖಿ ಚಿಂತನೆಗಳ ಕುರ್ತ್ ಲೇಖನ ಬೇಕಾದೆ. ಯಾವುದೇ ವಿವಾದಾತ್ಮಕ ಬರವಣಿಗೆ ಬೇಡ. ಓದುಗರ ಮನ್ಸಿಗೆ ಕುಸಿ ಕೊಡುವ, ಬುದ್ಧಿನ ಪ್ರಚೋದಿಸುವ, ಚಿಂತನೆ ಮೂಡ್ಸುವಂತ, ಮಾರ್ಗದರ್ಶನ ಕೊಡುವಂತ ಬರವಣಿಗೆ ಬೇಕಾದೆ. ಸೂಕ್ತ ಆದ ಬರವಣಿಗೆನ ಆಯ್ಕೆ ಮಾಡಿ ಪ್ರಕಟಿಸಲಾದೆ. ಪ್ರಕಟ ಆದ ಬರವಣಿಗೆಗೆ ಪ್ರೋತ್ಸಾಹ ಸಂಭಾವನೆಯೂ ಉಟ್ಟು.

ಇದೀಗ ಓದುಗರ ಸಂಖ್ಯೆ ಹೆಚ್ಚಾಗುಟ್ಟುತ್ತೇಳುವ ಕುಸಿ ನಮ್ಮದ್. ಸಭೆ ಸಮಾರಂಭಗಳ್ಲಿ ಹಿಂಗಾರಕ್ಕೆ ಚಂದಾದಾರರಾಗಿ ಅಧಿಕೃತ ರಶೀತಿ ಪಡಿತಾ ಒಳೊ. ಕೆಲ ಆಸಕ್ತರ್ ಅಕಾಡೆಮಿ ಕಚೇರಿಗೆ ಬಂದ್ ಚಂದಾದಾರರಾಗ್ತಾ ಒಳೊ. ಚಂದಾ ಹಣ ಮೂರು ವರ್ಷಕ್ಕೆ ಬರೀ ಇನ್ನೂರು ರೂಪಾಯಿ. ಆಜೀವ ಸದಸ್ಯರಾದರೆ ಆರುನೂರು ರೂಪಾಯಿಯಷ್ಟೆ.

ಚಂದಾ ಹಣ ಏರಿಕೆ ಆಕೆ ಮುಂದೆ ಆಸಕ್ತರ್ ಚಂದಾದಾರರಾಗಿತ ಅಕಾಡೆಮಿ ಕೋರಿಕಂಡದೆ. ನಿಮ್ಮ ಬಂಧು ಬಾಂಧವ್ಯ ನೆರೆಕರೆ ಆಸಕ್ತರ್‌ಗೆ ಚಂದಾದಾರರಾಗಿತ ಹೇಳಿ 'ಹಿಂಗಾರ'ನ ಪ್ರೋತ್ಸಾಹಿಸಿ ಭಾಷೆನ ಬೆಳ್ಸಿತ ನಾವ್ ಈ ಮೂಲಕ ಕೋರಿಕಂಡವೆ.

ಹೋದ ವರ್ಸ ಈ ಸಮೆಲಿ ಭಾಗಮಂಡಲ ಕಡೆ ಸುಮಾರ್ ನೂರೈವತ್ತ್ ಇಂಚ್‌ನಷ್ಟ್ ಮಳೆ ಆಗಿತ್ತ್. ಈ ವರ್ಷ ಹತ್ರ ಹತ್ರ ಐವತ್ತ್ ಇಂಚ್‌ನಷ್ಟ್ ಮಳೆ ಆಗುಟ್ಟಷ್ಟೆ. ಭೂಮಿಲಿ ಜಲದ ಕಣ್ಣ್ ಬುಟ್ಟಿತ್‌ಲೆ. ಹಿಂಗೇ ಆದರೆ ಮುಂದೆಕೆ ಕುಡೆಕೆ ನೀರಿಗೆ ಬರ ಆಬುಟದೆ. ಮಳೆನೂ ಇಲ್ಲೆ, ಬೆಳೆನೂ ಇಲ್ಲೆತ್ತೇಳ್ರೆ ಬದ್ಕ್ ನೀಸುದು ಹೆಂಗೆತ ಜನ ಕಳವಳಗೊಂಡೊಳೊ. ಹದ ಮಳೆ ಬಂದ್ ಒಳ್ಳ ಬೆಳೆ ಬರ್ಲಿತ ಹಿಂಗಾರ ಆಶಿಸಿದೆ. ಹೋದ ವರ್ಷದಂಗೆ ಜನಕೆ ಕಷ್ಟ ಆಗದಿರಲಿ. ಎಲ್ಲವ್ಕೂ ಸುಖದ ಬದ್ಕ್ ಸಿಕ್ಕಲಿತ ಹಿಂಗಾರ ಶುಭಕೋರ್ದೆ.

✍ **ಬಾರಿಯಂಡ ಜೋಯಪ್ಪ.**
ಸಂಪಾದಕ

ಪ್ರಕಟ ಆದ ಬರವಣಿಗೆಗೆ
ಆಯಾ ಬರಹಗಾರರೆ ಜವಾಬ್ದಾರರ್.

# ಹಿಂಗಾರ ಒಡ್ಸಕನ

ಪ್ರಾರ್ಥನೆ

# ಕುಲದೈವ ತಿಮ್ಮಪ್ಪ

ಸ್ವಾಮಿ ನಿನ್ನ ಗ್ಯಾನ ಬ್ಯಾನೆ ಮರ್‌ಸಿದೆ
ಪುಣ್ಯ ದಿವ್ಯರೂಪ ನಮ್ಮ ಕಣ್ಣ್ ತುಂಬಿದೆ
ಗೋವಿಂದನ ಧ್ಯಾನ ನಿತ್ಯ ಮನ್‌ಸ್ ಮುಟ್ಟಿದೆ
ವೆಂಕಟೇಶ ಧ್ಯಾನ ಲಾಯ್‌ಕ ಕೆಮಿಲಿ ನಿತ್ತದೆ ॥ ಸ್ವಾಮಿ ॥

ವೈಕುಂಠಲಿ ಕುದ್ದ್ ನೀನ್ ಅಪ್ಪಾ ತಿಮ್ಮಪ್ಪಾ
ನಂಬಿ ನಿತ್ತ ಭಕ್ತ ಜನರ ನೀನೇ ಕಾಯಪ್ಪಾ
ಎಲ್ಲಾ ಜನಕೆ ದೈವ ಸ್ವಾಮಿ ದೇವಾ ನೀನಪ್ಪಾ
ಗುಂಡ ಕಟ್ಟಿ ಹರಕೆ ಮಾಡ್‌ವೆ ನಿಂಗೆ ವೆಂಕಪ್ಪಾ ॥ ಸ್ವಾಮಿ ॥

ನಿನ್ನ ಪೊರ್ಲ್ ನೋಡಿಕೆ ಕಣ್ಣ್ ಸಾಲ್‌ದುಲೆ
ಎರಡ್ ಕೈಲಿ ನಿನ್ನ ಪೂಜೆ ಮಾಡಿಕಾದುಲೆ
ಹೊಗಳಿಕುಟ್ಟ್ ಶ್ರೀನಿವಾಸ ಪದಗ ಸಿಕ್ಕುಲೆ
ನಿನ್ನ ಜಪಿಸಿ ಹಾಡಿಕೆ ಈ ಜಲ್ಮ ಸಾಲ್‌ದುಲೆ ॥ ಸ್ವಾಮಿ ॥

* * * * *

✍ ಕೊಟ್ಟಕೇರಿಯನ ಲೀಲಾ ದಯಾನಂದ

**ಕಥಾ ಜೊಂಪೆ**

# “ಅಕ್ಕನ ಬೆಳ್ಚಿಲ್”

ಎಡ ಕೈಲಿ ಅರ್ಸಿಣ ಬಣ್ಣದ ಟೇಪು, ಬಲ್ದ ಕೈಲಿ ಕೊಂಬುನ ಬಾಚಣಿಕೆ ಹಿಡ್ದ್‌ಕಂಡ್ ಶಾಲಿನಿ ಗೂಡೆ ಅದರ ಅಕ್ಕನ ಮನೆ ಎಲ್ಲಾ ಹುಡ್ಕಿತ್. ಸಾಲೆಗೆ ಹೋಕೆ ಹೊತ್ತಾತ್. ಇನ್ನ್ ತಲೆ ಬಾಚುದು ಯಾಗ? ಎಂತ ನೆನ್ಸಿಕಂಡ್.

“ಅಕ್ಕಾ, ಅಕ್ಕಾ ಎಲ್ಯೊಳಾ? ಸಾಲೆಗೆ ಹೊತ್ತಾತ್ ಬಾ ತಲೆ ಬಾಚ್” ಎಂತ ಹೇಳಿಕಂಡೇ ಹುಡ್ಕಿತ್. ಯಾಗೋಳು ಕನ್ನಟಿ, ಬಾಚಣಿಕೆ, ಎಂಣೆ ಮಿಳ್ಳಿ ಹಕ್ಕಲೆ ಇಸಿಕಂಡ್ ಮಾಲಿನಿ ತಂಗೆನ ಕರ್ಯತಿತ್ತ್. ಇಂದ್ ಅದ್ ಕಾಂಬೊದುಲ್ಲೆ. ಅಕ್ಕನ ಕರ್ಕಂಡೇ ಶಾಲಿನಿ ಇಜ್ಜಲ್‌ಗೆ ಬಾತ್. ತೊಳ್ಸಿಕಟ್ಟೆ ಹಕ್ಕಲೆ ಮಾಲಿನಿ ತೊಳ್ಸಿಗೆ ಒಂದು ಚೊಂಬು ನೀರ್ ಹೊಯ್ದ್, ಸುತ್ತು ಬಾತಿತ್ತ್. ಅಕ್ಕನ ಕಂಡದ್ ಶಾಲಿನಿಗೆ ಜೂವ ಬಂದಂಗಾತ್. ಮಾಲಿನಿ ಹಕ್ಕಲೆ ಹೋಗಿ,

“ಅಕ್ಕಾ, ತಲೆ...”ಂತ ಹೇಳಿ ಅದರ ಲಂಗದ ಕೊಡಿನ ಹಿಡ್ಕಂಡತ್. ಅದ್ ಸಿಟ್ಟ್‌ಂದ್ ತಂಗೆನ ಕೈಯಿಂದ ಲಂಗನ ಬುಡ್ಸಿಕಂಡತ್. ಮಾಲಿನಿಗೆ ನಿನ್ನೆ ನಡ್ದ ಸಂಗತಿಂದಾಗಿ ತಂಗೆನ ಮೇಲೆ ಬಂದ ಸಿಟ್ಟ್ ಇನ್ನ್ ಸಾ ಇಳ್ತಿಲ್ಲೆ. ನಿನ್ನೆ ಹಿಂಬೊತ್ ಸರ್ಸಕ್ಕನ ಮನೆಂದ ಗೋರಟೆ ಮುಗುರುನ ಕೊಯ್ದ್ ತಾಕೆ ತಂಗೆನೊಟ್ಟಿಗೆ ಹೇಳಿತ್ತ್. ಆದರೆ ಶಾಲಿನಿ ಅಲ್ಲಿಗೆ ಹೋಕೆ ಒಪ್ಪಿತ್ಲೆ.

“ಅಕ್ಕಾ, ಅವರ ಮನೆಲಿ ಎರ್ಡ್ ಹಡ್ಗಾಯಿ ನಾಯಿಗ ಒಳೊ. ಅವು ಬೊಗ್ಗಿಕಂಡ್ ಕಚ್ಚಿಕೆ ಬಂದವೆ. ನಾ ಅಲ್ಲಿಗೆ ಹೋದುಲ್ಲೆ”ಂತ ಶಾಲಿನಿ ಅಕ್ಕನೊಟ್ಟಿಗೆ ಹೇಳಿತ್ತ್.

“ನಾಯಿ ಬೊಗ್ಗದೆ ನೀ ಬೊಗ್ಗಿಯನೋ. ನಿಂಗೆ ಅದೊಂದ್ ನೆವನ. ಮನೇವ್ರ ಕರ್ದರೆ ಅವು ಬಂದ್ ಹಿಡ್ಕಂಬೋದ್ಲೆನೋ? ನಿಂಗೆ ಹೋಕೆ ಉದಾಸೀನ. ಈಗೀಗ ನಿಂಗೆ ನನ್ನ ಮಾತ್‌ಂತೇಳ್ರೆ ಕಾಲ್‌ಂದ ಕಸಂತ ಹೇಳಿತ್ತ್. ಎಸ್ಟ್ ಹೇಳ್ರೂ ಶಾಲಿನಿ ಆ ಮನೆಗೆ ಹೋಕೆ ಒಪ್ಪಿತ್ಲೆ. ನಿನ್ನೆ ನಡ್ದದೆಲ್ಲಾ ನೆಂಪಾಗಿ ಮಾಲಿನಿ,

“ಹಾಂ, ಈಗ ನಿಂಗೆ ಅಕ್ಕ ಬೇಕ್ ಅಲ್ಲ” ನನ್ನ ಒಂದ್ ಕೆಲ್ಸ ಮಾಡಿಕೆ ನಿಂಗಾದೆನೋ? ನಂಗಾಕಿಲ್ಲೆ. ನೀನೇ ತಲೆ ಬಾಚಿಕ”ಂತ ಹೇಳಿ ಬಿರ ಬಿರನೆ ಮನೆ ಒಳಗೆ ಹೋತ್.

ಶಾಲಿನಿನ ಮೋರೆ ಚಪ್ಪೆ ಆತ್. ಇನ್ನೇನ್ ಮಾಡ್ದು? ನೋಡೊಮೊ. ಅತ್ತಿಗೆ ಒಟ್ಟಿಗೆ ಕೇಳೊಮೋಂತ ಅತ್ತಿಗೆನ ಹುಡ್ಕಿಕಂಡ್ ಅಡ್ಗೆ ಕೋಣೆಗೆ ಹೋತ್. ಅತ್ತಿಗೆ ಕಡ್ಕಲ್‌ಲಿ ಕೋಳಿ ಗೈಪು ಮಾಡಿಕೆ ಹುಳಿ ಮೆಣ್ಸ್ ಕಡ್ಯತಿದ್ರೊ. ಮಧ್ಯಾಹ್ನದ ಊಟಕೆ ಅವರ ತಂಗೆ ಮತ್ತೆ ತಂಗೆ ಗಂಡ ಬಂದವೆ ಗಡ. ಬೊಳ್ಪುಗೆ ಅಣ್ಣ,

ಅತ್ತಿಗೆ ಮಾತಾಡಿಕೊಂಬೊದರ ಶಾಲಿನಿ ಕೇಳ್ಸಿಕಂಡಿತ್ತ್. ಇನ್ನ್ ಅತ್ತಿಗೆನ ನೊಂಬಿರೆ ಆಕಿಲ್ಲೇಂತ ಗ್ರೇಸಿಕಂಡ್, ತಲೆನ ಜೆಡೆ ಬುಡ್ಸಿ, ಬಾಚಣಿಕೆಲಿ ಬಾಚಿಕೆ ಸುರುಮಾಡ್ತ್.

ಶಾಲಿನಿ ಮೂರ್ನೇ ಕ್ಲಾಸ್‌ಲಿ ಓದ್‌ತಿತ್ತ್. ಅದ್ಕೆ ಯಾಗೋಳೂ ಮಾಲಿನಿನೇ ಜೆಡೆ ಹಾಕುದು. ಅದ್ ಪಂರ್‌ಚಿಕಂಡ್ ಒಳಗೆ ಹೋದರ, ಶಾಲಿನಿ ತಲೆ ಬಾಚಿಕೆ ಪರ್ದಾಟ ಮಾಡ್ದರ ಎಲ್ಲಾ ಅದರ ಉಗ್ಗವ ನೋಡ್ದೊ. ಅವು ಶಾಲಿನಿನ ಹಕ್ಕಲೆ ಬಂದ್ ಅದರ ಕೈಯಿಂದ ಬಾಚಣಿಕೆ ತಕಂಡ್,

"ಬಾ ಮಗಾ, ನಾ ತಲೆ ಬಾಚಿನೆ. ಅಬ್ಬಾ! ಅದರ ಹಂಕಾರನೇ? ಕೂಸುಗೆ ಸಾಲೆಗೆ ಹೋಕೆ ಹೊತ್ತಾದೆ. ಅದ್ಕೆ ಇರ್ದು ಎರ್ಡ್ ಪೊದುಂಕುಳು ಕೂದೋಲು. ಅದರ ಬಾಚಿ ಕಳ್ಸಿಕೆ ಆದ್ಲೆನೋ?"ಂತ ಮಾಲಿನಿಗೆ ಬೊಯ್ಕಂಡೇ ಉಗ್ಗವ ಹೇಳ್ದೊ. ಅದರೆಡೆಲಿ ಮಾಲಿನಿ, ಶಾಲಿನಿನ ಅವ್ವಂಗೂ ಉಗ್ಗವನ ಕೈಲಿ ನಾಕ್ ಬೊಯ್ಗಳ ಸಿಕ್ಕಿತ್. ಅವು ಶಾಲಿನಿನ ಹಕ್ಕಲೆ,

"ನಿನ್ನ ಅಯ್ಯೆಗಂತೂ ಮಕ್ಕಳ ಹೆತ್ತ್ ಹಾಕಿರೆ ಆತ್. ಅವರ ಚಾಕ್ರಿ ಮಾಡಿಕೆ ನಾ ಒಳೆಲೇ" ಒಂದಿನ ಆದರ್ ಅದ್ ಮಕ್ಕಳಿಗೆ ಉಡ್ಸುದಾಗಲಿ, ಮೀಸುದಾಗಲೀ, ತಲೆ ಬಾಚುದಾಗಲೀ ಮಾಡಿಟೋ, ಯಾಗೋಳೂ ಕೆಲ್ಸಾ, ಕೆಲ್ಸ. ಇಡೀ ದಿನ ಮನೆ ಕೆಲ್ಸ, ಅಡ್ಗೆ ಕೆಲ್ಸಾಂತ ಮಕ್ಕಳ ಮರ್ತೇ ಬುಟ್ಟುಟ್ಟು"ಂತ ಸೊಸೆಗೆ ಶಾಪ ಹಾಕಿಕಂಡೇ ತಲೆ ಬಾಚಿಕೆ ಹೊರ್ಟ್ರೊ. ಶಾಲಿನಿನ ತಲೆ ನೋಡಿ,

"ಏನ್ ಕೂಸೂ, ತಲೆಲಿ ಎಂಣೆ ಪಸೆನೆ ಇಲ್ಲೆ. ಇಂದಾ ನಾ ಈಗ ಬನ್ನೆ"ಂತ ಹೇಳಿ ಅಡ್ಗೆ ಕೋಣೆಗೆ ಹೋಗಿ, ಅವರ ಅಂಗೈ ತುಂಬಾ ಕಾಯೆಣ್ಣೆ ಹಾಕಂಡ್ ಬಂದ್ ಶಾಲಿನಿನ ತಲೆಗೆ ಬೊಟ್ಟಿದೊ.

"ಬೇಡ ಉಗ್ಗವಾ, ಇಸ್ಟ್ ಎಣ್ಣೆ ಹಾಕಿರೆ ಹಣೆಲೆಲ್ಲಾ ಎಣ್ಣೆ ಅರ್ದದೆ. ನಂಗೆ ಮಕ್ಕ ಡೋಂಗಿ ಮಾಡ್ವೆ" – ಶಾಲಿನಿ ಹೇಳ್ತ್.

"ನೆತ್ತಿಗೆ ಎಣ್ಣೆ ಹಾಕಿರೆ ಕಣ್ಣ್‌ನ ಚೂಡು ಎಲ್ಲಾ ಇಳ್ದದೆ. ನೀ ಸುಮ್ಮಂಗೆ ಕುದ್ರು"–ಂತ ಹೇಳಿ ನೆತ್ತಿನ ತಟ್ಟಿ, ತಟ್ಟಿ ಒಪ್ಪ ಮಾಡ್ದೊ ಕೊಂಬುನ ಬಾಚಣಿಕೆಂದ ತಲೆನ ಒರ್ಪಾಗುವಾಂಗೆ ಬಾಚಿ ಬಗ್ದ್ ಜಡೆ ಹಾಕಿ, ಜಡೆ ಕೊಡಿಗೆ ಕೂದೊಲು ಬಿಚ್ಚಿದಾಂಗೆ ಗಂಟ್ ಹಾಕಿ ಗೊಂಡೆ ಹಾಕಿದೊ. ಉಗ್ಗವ ಹಾಕಿದ ಜಡೆ ಶಾಲಿನಿ ಮೊನ್ಸ್‌ಗೆ ಹಿಡ್ಸಿತ್ಲೆ. ಉಗ್ಗವ ಜಾಲೆ ಗುಡ್ಸಿಕೆ ಇಜ್ಜೆಲ್‌ಗೆ ಹೋದೊ.

ಅಸ್ಟಾಕನ ಒಳಗೆನ ಕೋಣೆಂದ ಮಾಲಿನಿ ಬಂದ್ ತಂಗೆದ ಜಡೆನ ನೋಡಿ ಬಿದ್ದ್, ಬಿದ್ದ್ ನೆಗಾಡ್ತ್.

"ಅಯ್ಯೋ, ಒಳ್ಳೆ ಕೊರ್‌ಂಬೆತಿ ಹಾಂಗೆ ಕಂಡ್ಯಾ. ನಿಂಗೆ ಹಾಂಗೇ ಆಕು. ಹೋಗು, ಹೋಗು. ಈ ಕೋಲಲಿ ಸಾಲೆಗೆ ಹೋಗು. ನಿನ್ನ ಜೊಸ್ತಿ ಗೂಡೆಗ

ನಿಂಗೆ ಮಕಾರ್ ಮಾಡದೆ ಇರಿಕಿಲ್ಲೆ"ಂತ ಮಾಲಿನಿ ಹೇಳ್ದರ ಕೇಳಿ ಶಾಲಿನಿಗೆ ಮೊರ್ಡಿಕೆ ಬಾತ್.

"ಅಕ್ಕಾ, ದಮ್ಮಯ್ಯ, ಇನ್ನ್ ನೀ ಹೇಳ್ದ ಎಲ್ಲಾ ಕೆಲ್ಸನ ಮಾಡ್ನೆ. ನಂಗೆ ಈ ಜೆಡೆ ಬೇಡ. ನೀನೆ ಪೊರ್ಲುಲಿ ಜೆಡೆ ಹಾಕ್. ಉಗ್ಗವ ಹಾಕಿದ ಜೆಡೆ ನಂಗೆ ಸಮಾ ಕಾಂಬೋದುಲ್ಲೆ."ಂತ ಶಾಲಿನಿ ಮೊರ್ಬ್‌ಕಂಡ್ ಹೇಳ್ತ್.

"ಹಾಂಗೆ ಬಾ ದಾರಿಗೆ. ಎಲ್ಲಿ ನನ್ನ ಎದ್ರ್ ಹತ್ತ್ ಏತ ತೆಗ್ದ್, ತೊಪ್ಪಾತ್‌ಂತ ಮಾಫು ಕೇಳ್"ಂತ ಮಾಲಿನಿ ತಂಗೆಗೆ ಹೇಳ್ತ್.

ಪಾಪದ ಗೂಡೆ ಶಾಲಿನಿ. ಅದ್ಕೆ ಬೇರೆ ದಾರಿನೇ ಕಂಡತ್ಲೆ. ಅಕ್ಕ ಹೇಳ್ದಾಂಗೆ ಎರ್ಡ್ ಕೈಲಿ ಕೆಬಿನ ಹಿಡ್ಕಂಡ್ ಕುದ್ದ್, ಎದ್ದ್ ಏತ ತೆಗ್ತ್. ಮಾಲಿನಿ ಒಂದ್, ಎರ್ಡ್... ಎಂತ ಲೆಕ್ಕ ಮಾಡಿಕಂಡೇ ಇತ್ತ್. ಅಕೆರಿಗೆ,

"ಈಗ ನೀ ನಾ ಹೇಳ್ದಾಂಗೆ ಹೇಳೊಕು. ಕಕ್ಕೆ ಹೇಲ್ ತಿಂದನೆ, ನಾಯಿ ಹೇಲ್ ತಿಂದನೆ" – ಮಾಲಿನಿ ತಂಗೆಗೆ ಹೇಳ್ತ್.

"ಚೀ, ಚೀ ನಾ ಹೇಳುದ್ಲೆ. ಕಕ್ಕೆ ಹೇಲ್, ನಾಯಿ ಹೇಲ್‌ನ ಯಾರಾದರ್ ತಿಂದವೆನೋ?"– ಶಾಲಿನಿ ಹೇಳ್ದ್.

"ಏನ್ ನೀ ಬಾಯಿಲಿ ಹೇಳ್ರೆ ನೀ ತಿಂದಾಂಗೆ ಆದೆನೋ? ಹೇಳ್, ಹೇಳ್. ಇಲ್ಲರೆ ನಾ ನಿಂಗೆ ಜೆಡೆ ಹಾಕಿಕಿಲ್ಲೆ."–ಮಾಲಿನಿ ಹೇಳ್ತ್.

ಶಾಲಿನಿ ಉಪಾಯ ಇಲ್ಲದೆ, ಹಂಗೆ ಹೇಳ್ತ್.

"ಹಾಂ, ನಿಲ್ಲ್, ನಿಲ್ಲ್. ಇನ್ನೊಮ್ಮೆ ನಾ ಹೇಳ್ದಾಂಗೆ ಹೇಳ್. ಕಕ್ಕೆ ಹೇಲ್ ತಿಂದನೆ, ನಾಯಿ ಹೇಲ್ ತಿಂದನೆ, ನನ್ನ ಹೇಲ್ ತಿಂದನೆ" – ಮಾಲಿನಿ ಹೇಳ್ತ್.

"ಎಂತಕ್ಕಾ? ನಾ ನಿನ್ನ ಹೇಲ್ ತಿನ್ನೊಕೋ, ನಾ ಹೇಳುದ್ಲೆ. ನೀ ನಂಗೆ ಜೆಡೆ ಹಾಕುದೂ ಬೇಡ. ಗೂಡೆಗ ತಮಾಸೆ ಮಾಡ್ರೆ ಮಾಡಲಿ." – ಶಾಲಿನಿ ಸಿಟ್ಟ್‌ಂದ ಅಕ್ಕಂಗೆ ಎದ್ರುತ್ತರ ಕೊಟ್ಟತ್.

"ಹಾಂಗೋ, ಸರಿ ಹಾಂಗಾರೆ. ಹಾಂಗೆ ಹೋಗು." – ಮಾಲಿನಿ ಹೇಳ್ತ್.

ಶಾಲಿನಿ ಗೂಡೆ ಚೀಲನ ಹೆಗ್ಲ್‌ಗೆ ಕೋಸಿಕಂಡ್ ಮನೆಂದ ಹೊರಗೆ ಕಾಲ್ ಇಸಿತ್.

ಆಗ ಮಾಲಿನಿಗೆ ಇನ್ನ್ ಇದ್ ನನ್ನ ಮಾತ್ ಕೇಳುದ್ಲೇಂತ ಗೊತ್ತಾತ್. ತಂಗೆನೊಟ್ಟಿಗೆ ಕೋಪ ಮಾಡ್ರೆ ಅದರ ಬಿಟ್ಟಿ ಕೆಲ್ಸ ಮಾಡಿಕೆ ಜನ ಇಲ್ಲೆ. ಹೇಂಗಾದರ್ ಅದರ ಒಡಂಬಡ್ಸೊಕೂಂತ,

"ಹಾಂ, ನಿಲ್ಲ್, ನಿಲ್ಲ್. ಎಸ್ಟಾದರ್ ನೀ ನನ್ನ ತಂಗೆ ಅಲ್ಲನೋ? ನಿಂಗೆ

ಜೋಸ್ತಿ ಗೂಡೆಗ ಮಕಾರ್ ಮಾಡ್ರೆ, ನಂಗೆ ಮಾಡ್ದಾಂಗೆ ಅಲ್ಲನೋ? ನೀ ಬಾಯಿಲಿ ಹೇಳ್ದು ಬೇಡ. ಸ್ಲೇಟ್‌ಲಿ ಬರ್ದು ತೋರ್ಸು" – ಮಾಲಿನಿ ಹೇಳ್ತ್.

"ಬೇಡ, ಬೇಡ. ನಂಗೆ ಸಾಲೆಗೆ ಹೊತ್ತಾತ್ ಶಾಲಿನಿ ಹೇಳ್ತ್."

ಮಾಲಿನಿ, ಶಾಲಿನಿಗೆ ಯಾಗೋಳೂ ಲೆಕ್ಕ ಹೇಳಿ ಕೊಡ್ತಿತ್ತ್. ಲೆಕ್ಕ ಬರ್ಯಕೆ ಸ್ಲೇಟ್‌ನ ಉಪ್ಯೋಗ್‌ಸಿತ್ತ್. ಮಾಲಿನಿ ಆ ಸ್ಲೇಟ್‌ನ ಶಾಲಿನಿ ಹಕ್ಕಲೆ ಕೊಟ್ಟ್,

"ಬರ್ದ್ ತೋರ್ಸ್"–ಂತ ಹೇಳ್ತ್. ಶಾಲಿನಿ ಒಪ್ಪಿತ್ಲೆ.

"ಆತ್, ನೀ ಅದರ ಬರ್ಯಬಡ. ನಾ ಒಂದ್ ವಾಕ್ಯ ತಿರ್ಗಾ ಮುರ್ಗಾ ಹೇಳ್ನೆ. ಅದರ ಬರಿ. ಮತ್ತೆ ನಾ ನಿಂಗೆ ಪೊರ್ಲುಲಿ ಎರ್ಡ್ ಜೆಡೆ ಹಾಕಿನೆ. ನನ್ನ ಹಕ್ಕಲೆ ಕೆಂಪು ಬಣ್ಣದ ಟೇಪು ಉಟ್ಟು, ಅದರ ಜೆಡೆ ಕೊಡಿಗೆ ಹಾಕಿ ಕೆಬಿ ಹಕ್ಕಲೆ ಎತ್ತಿ ಕಟ್ಟಿನೆ. ಆಗ ನೀ ಎಸ್ಟ್ ಪೊರ್ಲು ಕಾಂಬ?"ಂತ ಮಾಲಿನಿ ತಂಗೆಗೆ ಬಣ್ಣನೆ ಮಾಡಿ ಹೇಳ್ತ್.

ಅಕ್ಕನ ಮಾತ್‌ನ ಕೇಳಿ ತಂಗೆಗೆ ಆಸೆ ಆತ್. ಅದ್ ಅಕ್ಕನ ಕೈಯಿಂದ ಸ್ಲೇಟ್ ತಕಂಡ್,

"ಹೇಳ್"ಂತ ಹೇಳ್ತ್.

ಅಕ್ಕ ಹೇಳ್ತ್, "ದಂತಿತದಾರೆಬಲು ಹೇನತದಾಳಿಹೇ".

ಅಕ್ಕ ಹೇಳ್ದಾಂಗೆ ತಂಗೆ ಬರ್ತ್.

"ಇದೆಂತಾ ಬರ? ಇದಕ್ಕೆ ಅರ್ತ ಇಲ್ಲೆ."–ಶಾಲಿನಿ ಮಾಲಿನಿಗೆ ಹೇಳ್ತ್.

"ಈಗ ನೀ ಬಾ. ನಾ ಜೆಡೆ ಹಾಕಿನೆ. ಹಿಂಬೊತ್ತ್ ಬಾಕನ ಈ ವಾಕ್ಯದ ಅರ್ತನ ನಿಂಗೆ ಹೇಳ್ನೆ ಎಂತ ಮಾಲಿನಿ ಹೇಳಿಕಂಡ್ ತಂಗೆನ ಹಕ್ಕಲೆ ಕರ್ತ್.

ಒಮ್ಮೆ ಅಕ್ಕ ತನಿಗೆ ಜೆಡೆ ಹಾಕಿರೆ ಸಾಕ್‌ಂತ ಶಾಲಿನಿ, ಮಾಲಿನಿ ಹೇಳ್ದಾಂಗೆ ಅದ್ಕೆ ಬರ್ದ್ ಕೊಟ್ಟ್, ಅಕ್ಕನ ಹಕ್ಕಲೆ ಜಡೆ ಹಾಕ್ಸಿಕಂಡತ್. ಕುಸಿಂದ ಸಾಲೆಗೆ ಹೋತ್.

ಹಿಂಬೊತ್ತ್ ಬಾಕನ ಮಾಲಿನಿ ತಂಗೆ ಕೈಗೆ ಸ್ಲೇಟ್ ಕೊಟ್ಟ್, "ನೀ ಬರ್ದದರ ತಿರ್ಗಿಸಿ ಓದು"–ಂತ ಹೇಳ್ತ್.

ಶಾಲಿನಿ ಓದಿತ್. ಆಗ ಅದ್ "ಹೇಳಿದಾತನ ಹೇಲು ಬರೆದಾತ ತಿಂದ"ಂತ ಅದ್ಕೆ ಅರ್ತ ಆತ್. ಮಾಲಿನಿ "ಹೋ"– ಎಂತ ನೆಗಾಡ್ತ್.

ಶಾಲಿನಿ ಕೈ ಬೇರಿಕಂಡ್ ಮಾಲಿನಿನ ಹೊಡ್ಯಕೇಂತ ಓಡ್ಸಿಕಂಡ್ ಮನೆ ಇಡೀ ಓಡ್ತ್.

✍ಎಂ. ಜಿ. ಕಾವೇರಮ್ಮ

# ರೌಡಿ ರಾಜಣ್ಣ

.....ಅಷ್ಟೊತ್ತಿಗೆ ಕಾಡ್‌ನ ಒಂದು ಪುಡೆಂದ ಮೊನ್ಸ್‌ನ ದನಿ ಕೇಳ್ದಂಗೆ ಆತ್. ಮುಂದೆ ಮುಂದೆ ಹೋಕನ ಅದ್ ಒಂದ್ ಹೆಣ್ಣ್ ದನಿಂತ ಅರ್ತ ಆತ್, ಮತ್ತೂ ಮುಂದೆ ನಡೆಕನ ದೂರಲಿ ಕಾಡ್ ಬಲ್ಲೆ ಸೆರೆಲಿ ಮೊನ್ಸ್‌ರಂತ ಸಂಶಯ ಬಾತ್. ಹಕ್ಕಲೆ ಹೋಗಿ ನೋಡ್ಕನ ಒಬ್ಬ ನೆಲಲಿ ಬಿದ್ದುಟು, ಒಂದು ಗೂಡೆ ಅವನ ಹಕ್ಕಲೆ ಕುದ್ಕಂಡ್ ಮರ್ಡ್‌ತಾವುಟ್ಟು. ಇಚಾರ್ಸ್‌ಕನ ಗೂಡೆ ದುಕ್ಕುಡ್ಸಿ, ದುಕ್ಕುಡ್ಸಿ ಹೇಳ್ತ್.

"ನೋಡಿ ನನ್ನ ಅಣ್ಣ ಮರಂದ ಬಿದ್ದ್ ಪೆಟ್ಟಾಗಿ ಉಸುರ್ ಮಾತ್ರ ಕಂಡದೆ." ಅವನ ಆದಷ್ಟ್ ಬೇಗ ಆಸ್ಪತ್ರೆಗೆ ಸಾಗ್‌ಸೊಕ್ಕುಂತ ಹೇಳ್ತ್. ಅಂತ ಆಕಸ್ಮಿಕಲಿ ಬೇರೆ ಮಾತಾಡ್ದು ಸರಿ ಅಲ್ಲಂತ ಗ್ರೇಸಿ ಬಿದ್ದವನ ಬೆನ್ನ್ ಮೇಲೆ ಹಾಕಿಕಂಡ್ ಮಾರ್ಗದ ಕಡೆಗೆ ನಡೆಕೆ ಸುರು ಮಾಡ್ತ್.

ಅದೊಂದು ಆಟಿ ತಿಂಗಳ ಅಮಾಸೆ ಕರಿಗೂಡು ಕತ್ತಲೆ ರಾತ್ರೆ. ಒಂದು ಕಡೆಂದ ಸುಂಯಿ ಸುಂಯಿ ಬೀಸುವ ಗಾಳಿ, ಗಾಳಿನೊಟ್ಟಿಗೆ ಜಡಿಮಳೆ. ಆಗಾಗ ಕೋಲ್ಮಿಂಚ್ ಬೆಳ್ಕ್ ಬಂದ್ ನಿಲ್ಲ್‌ಕನ, ಕೆಬಿ ಹೊಡ್ದ್ ಹೋವಂಗೆ ಶಬ್ದ ಮಾಡ್ವ ಗುಡ್‌ಗ್. ಆಕಾಶ ಕಪ್ಪು ಮೋಡಂದ ಮುಚ್ಚಿ ಹೋವುಟು. ದೂರಲಿ ಮಿಣ್ಪುಳಿ ಬೆಳ್ಕ್ ಮಾತ್ರ ಕಂಡದೆ. ಬೀಸ್‌ವ ಗಾಳಿಗೆ ಸಿಕ್ಕಿ ಕಾಡ್ ಬುಡಂದ ಮುರ್ದ್ ಬೀಳ್‌ವ ಮರಗಳ ಶಬ್ದ ಎಂತವಂಗೂ ಮುಂದೆ ಹೋಕೆ ಧೈರ್ಯ ಬಾರದ್.

ಮಳೆಲಿ ಸುಮಾರ್ ಅರ್ಧ ಕಿಲೋ ಮೀಟರ್ ಹೋಕನ ಒಂದ್ ಮಾರ್ಗ ಸಿಕ್ಕಿತ್. ಕರೆಲಿ ಅಣ್ಣನ ಮಲ್ಗ್‌ಸಿ ವಾಹನಗಳ ಕಾಯುತ್ತಾ ಕುದ್ದೊ. ಆ ಮಾರ್ಗಲಿ ಬಂದ ನಾಲ್ಕೈದ್ ವಾಹನಗ ಕೈ ತೋರ್‍ಸಿರೂ ನಮ್ಮ ಕಡೆ ತಿರ್ಗಿ ನೋಡದೆ ಹೊರ್‍ಟ್ ಹೋದೊ. ಹತ್ತ್ ನಿಮಿಷ ಕಾಯಕನ ಕೆಂಪು ಲೈಟ್ ಇರ್‍ವ ಒಂದು ವಾಹನ ನಮ್ಮ ಕಡೆ ಬಾತ್. ಹಕ್ಕಲೆ ಬಾಕನ ಹೆದ್ರಿ ಹೆದ್ರಿ ಕೈ ತೋರ್‍ಸ್‌ಕನ ಆ ಜೀಪು ಜೋರ್‌ಲಿ ಬ್ರೇಕ್ ಹಾಕಿ ಶಬ್ದ ಮಾಡ್ತಾ ಹನಿಯ ಮುಂದೆ ಹೋಗಿ ನಿತ್ತತ್. ವಾಹನಂದ ಮೂರ್ ನಾಲ್ಕ್ ಜನ ಕೈಲಿ ದೊಣ್ಣೆ ಹಿಡ್ಕಂಡ್ ನಮ್ಮ ಕಡೆ ಬಂದೊ. ಒಬ್ಬನಕ್ಕಲೆ ಕೋವಿ ಕೂಡಾ ಇತ್ತ್. ಹಕ್ಕಲೆ ಬಾಕನ ಅವು ಪೋಲಿಸ್‌ನವುಂತ ಗೊತ್ತಾತ್. ಸರ್ಕಲ್ ಇನ್ಸ್‌ಪೆಕ್ಟರ್ ಜೀಪಿಂದ ಇಳ್ತ್‌ಲ್ಲೆ. ಹಕ್ಕಲೆ ಬಂದ ಪೋಲಿಸಿನವು ನಮ್ಮ ಹೆಸ್ರ್, ವಿಳಾಸ ಬರ್‍ಕಂಡೊ. ಅವರ ಪ್ರಶ್ನೆಗಳಿಗೆ ಉತ್ತರ ಹೇಳ್ದ್ ಮೇಲೆ ಅಣ್ಣನ ಪರಿಸ್ಥಿತಿನ ನೋಡಿ, ಪೋಲಿಸಿನವು ಅವನ ಜೀಪಿಲಿ ಮಲ್ಗಿಸಿದೊ. ನಾವಿಬ್ಬರೂ ಅವನ ಎಡ ಬಲಲಿ ಕುದ್ದೊ. ಜೀಪು

ಆಸ್ಪತ್ರೆ ಕಡೆ ಫೋತ್.

ಟಾಪ್ ಗೇರ್‌ಲಿ ಹೊರ್ಸ್ಟ್ ಜೀಪು ಅರ್ಧ ಗಂಟೆಲಿ ಆಸ್ಪತ್ರೆಗೆ ಮುಟ್ಟಿತ್. ಆಗ ಬೆಳಿಗ್ಗೆನ ಜಾವ ನಾಲ್ಕ್ ಗಂಟೆ ಕಳ್ದುಟು. ನನ್ನ ಮತ್ತೆ ಅವನ ಫೋಟೋ ತೆಗದ್ ಬೆರಳಚ್ಚ್‌ನ ಗುರ್‌ತ್ ದಾಖಲೆ ಮಾಡಿಕಂಡೊ. ಬೆಳಿಗ್ಗೆ 8.00 ಗಂಟೆಗೆ ಅರ್ಧ ಕಿ.ಮೀ. ದೂರ ಇರುವ ಟೇಶನ್‌ಗೆ ಬಾಕೆ ಹೇಳ್ದೊ.

ಹೆದ್ರಿಕಂಡೇ ಟೇಶನ್‌ಗೆ ಹೋದೊ. ಅಲ್ಲಿ ಎಸ್. ಐ. ಮನೊತಜ್ಞ ಡಾಕ್ಟ್ರ ಸತ್ಯಾಂಶ ಹೊರೆಗೆ ಬಾವಂಗೆ ಕೇಳ್‌ವ ಲಾಜಿಕ್ ಪ್ರಶ್ನೆಗಳ ಸುರಿಮಳೆ ಆತ್. ಸುಮಾರ್ ಒಂದ್ ಗಂಟೆ ಕುದ್ದ ಮೇಲೆ ಸರ್ಕಲ್‌ನ ಕೋಣೆಗೆ ನಮ್ಮ ಕಳ್ಸಿದೊ. ಇನ್ಸ್‌ಪೆಕ್ಟರ್ ಬಾರಿ ಬುದ್ಧಿವಂತ. ಆರುವರೆ ಅಡಿ ಎತ್ತರದ ಆಜಾನುಬಾಹು. ಕೊಂಬ ಮೀಸೆ. ನೋಡ್ಕನ ಎಂತವಂಗೂ ಹೆದ್ರಿಕೆ ಆದು. ನಾಲ್ಕ್ ವರ್ಷ C.B.I ಲಿ ಸೇವೆ ಮಾಡ್ದ ಅಂವ ಕಾಶ್ಮೀರಲಿ ಒಂದೇ ಗುಂಡಿಗೆ ಮೂರ್ ಜನ ಪಾಕ್ ಭಯೋತ್ಪಾದಕರ ಹೊಡ್ಡ್ ಕೆಡ್ಗಿಟು. ಈ ವರ್ಸ ಅಂವಂಗೆ ರಾಷ್ಟ್ರಪತಿಗಳ ಶೌರ್ಯ ಪ್ರಶಸ್ತಿ ಕೂಡಾ ಸಿಕ್ಕಿಟು. ಇಲಾಖೆಲಿ ಅಂವಂಗೆ ಒಳ್ಳೆ ಹೆಸ್ರ್ ಉಟ್ಟು.

ಸರ್ಕಲ್ ಇನ್ಸ್‌ಪೆಕ್ಟರ್ ಮೇಜಿನ ಮೇಲಿದ್ದ ಕಂಪ್ಯೂಟರ್‌ನ ಚಾಲೂ ಮಾಡಿ ಸುಮಾರ್ ಐದ್ ನಿಮಿಷ ನೋಡ್ತಾ ಇತ್ತ್. ಒಂದು ಮಾಹಿತಿ ಪರದೆಲಿ ಬಾಕನ ಸೂಕ್ಷ್ಮಲಿ ಪರಿಶೀಲಿಸಿ ನೋಡ್ತ ಕುದ್ದತ್. ನಮ್ಮ ಇಬ್ಬರ ಹೊಕ್ಕೆ ಹೇಳಿ ನಾಳೆ ಇದೇ ಹೊತ್ತಿಗೆ ಟೇಷನ್‌ಗೆ ಹಾಜರಾಕೆ ಹೇಳ್ತ್. ನಾವು ಟೇಷನ್ ಗೇಟ್ ದಾಟಿ ಒಂದು ಹೆಜ್ಜೆ ಇಸಕನ ಒಬ್ಬ ಕಾನ್ಸ್‌ಟೇಬಲ್ ಓಡಿಕಂಡ್ ಬಂದ್ ನಮ್ಮ ವಾಪಾಸ್ ಸರ್ಕಲ್‌ನಲ್ಲಿಗೆ ಕಳ್ಸಿತ್. ನನ್ನ ಹೊರೆಗೆ ಕುದ್ರಿಕೆ ಹೇಳಿ, ಅಣ್ಣನ ಆಸ್ಪತ್ರೆಗೆ ದಾಖಲೆ ಮಾಡ್ದ್ ರಾಜಣ್ಣನ ಅರೆಸ್ಟ್ ಮಾಡಿ ಲಾಕಪ್ಪಿಗೆ ನನ್ನ ಎದ್ರೆ ಹಾಕಿದೊ. ರಾಜಣ್ಣನ ಮೇಲೆ ಕೊಲೆ, ಸುಲಿಗೆ, ಅತ್ಯಾಚಾರ, ದರೋಡೆಂತ ಸುಮಾರ್ 18 ಕೇಸ್‌ಗ ಇದ್ದೊ. ಸುಮಾರ್ 2 ವರ್ಸಂದ ಅಂವ ಪೋಲಿಸರಿಗೆ ಸಿಕ್ಕದೆ ತಿರ್ಗಾಡ್ತಿತ್ತ್. ರಾಜಣ್ಣನ ಮಾಹಿತಿ ಕೊಟ್ಟೊವುಕೆ ರೂ. 25,000/– ಬಹುಮಾನ ಕೂಡಾ ಪೇಪರ್‌ಲಿ ಜಾಹಿರಾತ್ ಬಂದಿತ್ತ್. ಜೀಪಿಲಿದ್ದ ಪೋಲಿಸಿಗೆ ರಾಜಣ್ಣನ ಮೇಲೆ ಸಂಶಯ ಬಾದೂ, ಟೇಸನ್‌ಗೆ ಮುಟ್ಟುವ ವರೇಗೆ ಬಾಯಿ ಬುಟ್ಟಿತಿಲ್ಲೆ. ಬೇರೆ ಬೇರೆ ಪ್ರಕರಣಗಳ ಎಲ್ಲಾ ಸೇರ್ಸಿ ರಾಜಣ್ಣನ ಮೇಲೆ ಗಂಭೀರವಾದ ಆರೋಪ ಪಟ್ಟಿ ಕೋರ್ಟಿಗೆ ಹೋತ್. ಎಲ್ಲಾ ಕೇಸಿಲಿ ಶಿಕ್ಷೆ ಆದರೆ ರಾಜಣ್ಣಂಗೆ 50 ವರ್ಷ ಸಜೆ ಕಂಡಿತಂತ ವಕೀಲ್‌ರ ಹೇಳಿಕೆ. 15 ದಿನಲಿ ಅಣ್ಣ ಉಸಾರಾಗಿ ಮನೆಗೆ ಬಾತ್. ಜೀವ ಉಳ್ಸಿದ ರಾಜಣ್ಣನ ಬುಡ್ಸಿಗೆ ಈಗ ದಿನಾಲೂ ಅಣ್ಣ ಕೋರ್ಟಿಗೆ ತಿರ್ಗ್‌ತಾವುಟ್ಟು.

✍'ವ್ಯಾಸ'

# ಬೆಚ್ಚಿ ಬಿದ್ದದ್ ಅಂದ್ ನಾ...

ಒಂದ್ ದಿನ ನಂಗೆ ಕಾರ್ಯನಿಮಿತ್ತವಾಗಿ ಮಂಗಳೂರಿಗೆ ಹೋಕೆ ಇತ್ತ್. ಹಂಗೆ ನನ್ನ ಎಲ್ಲ ಕೆಲ್ಸ ಮುಗಿಸಿ ಬಾಕನ ನಂಗೆ ಸೀದಾ ಸುಳ್ಯಕ್ಕೆ ಬಾವ ಬಸ್ಸ್ ಸಿಕ್ಕಿತ್. ನಾ ಆ ಬಸ್ಸಿಗೆ ಹತ್ತಿದೆ. ಬಸ್ಸಿಗೆ ಹತ್ತಿಕಾನ ಆ ಬಸ್ಸ್ ತುಂಬಾ ರಶ್ ಇತ್ತ್. ಕಂಡೆಕ್ಟರ್ ಬೈಯುದು ಕೇಳ್‌ತ ಇತ್ತ್ ಹಿಂದೆ ಹೋಗಿ, ಮುಂದೆ ಹೋಗಿತ. ಆದರೆ ಜನಗಳಿಗೆ ನಿಲ್ಲಿಕಾಗದೇ ಬಸ್ಸಲ್ಲಿ ಹುಳಬುಟ್ಟವರಂಗೆ ಹೊಣ್‌ಕ್‌ತ ಇದ್ದ, ಜನಂಗಳ ಮಧ್ಯೆ ನಾ ಕೂಡ ಒಂದು ಕಡೆ ನಿತ್ತೆ. ಬಸ್‌ಗೆ ಹತ್ತಿಕೆ ಮುಂದೆ ನನ್ನ ಮನಸ್‌ಲಿ ಇತ್ತ್, "ಇಂದ್ ಮಾತ್ರ ಬಸ್ಸ್‌ಲಿ ಕಿಟಕಿ ಸೈಡ್‌ಲಿ ಕುದ್ದ್‌ಕೊಂಡ್, ಇಯರ್ ಫೋನ್ ಹಾಕಂಡ್, ಪದ್ಯ ಹೇಳಿಕಂಡ್ ಹೋಕುತ." ಆದರೆ ಆ ಬಸ್‌ಗೆ ಹತ್ತಿಕಾನ ಮಾತ್ರ ನನ್ನ ಮನಸ್‌ಲಿ ಆದೇ ಬೇರೆ, "ಎಲ್ಲಾರ್ ಒಂದು ಸೀಟ್ ಸಿಕ್ಕಿರೆ ಸಾಕ್‌ತ". ಏಕೆತೆಳಿರೆ ಅಷ್ಟ್ ರಶ್ ಇತ್ತ್ ಆ ಬಸ್ಸ್. ಮತ್ತೆ ಸುಮಾರ್ ಬಿ.ಸಿ. ರೋಡ್ ಬಾಕನ ನಾ ನಿತ್ತ್‌ಕಂಡ್ ಇದ್ದ ಸೀಟ್‌ನ ಹಕ್ಕಲೇ ಒಬ್ಬ ಗಂಡಸ್ ಕುದ್ದುಕಂಡ್ ಇದ್ದವು ಇಳ್ದ್, ಆ ಹೊತ್ತಿಗೆ ನಾ ಆಚೆ ಈಚೆ ನೋಡದೇ ಆ ಸೀಟ್‌ಲಿ ರಪ್ಪ ಕುದ್ದೆ. ಬಸ್ ಸ್ವಲ್ಪ ದೂರ ಹೋಗಿ ಪುತ್ತೂರಿಗೆ ಎತ್ತಿಕಾನ ಒಂದು ಹೆಂಗಸ್ ಕೂಸ್‌ನ ಹಿಡ್ಕೊಂಡು ನಾ ಕುದ್ದ ಸೀಟ್‌ನ ಹಕ್ಕಲೇ ಬಂದ್ ನಿಂತ್‌ಕಂಡ್ ಸೀಟಿಗಾಗಿ ನನ್ನನ್ನೇ ನೋಡ್‌ತ ಇತ್ತ್. ಆದರೆ ನಾ ಮಾತ್ರ ಸೀಟ್ ಕೊಡುವ ಬದಲ್ ಆ ಕೂಸ್‌ನ ನನ್ನ ತೊಡೆಯ ಮೇಲೆ ಕುದ್ದ್‌ರ್‌ಸಿದೆ. ಕೂಸ್ ಮಾತ್ರ ನನ್ನ ಪರಿಚಯ ಇಲ್ಲದೇ ಮರ್‌ಟ್‌ಕಂಡ್ ಇತ್ತ್. ಮತ್ತೆ ನಾ ನನ್ನ ಬ್ಯಾಗ್‌ಲಿ ಇದ್ದ 2 ಡೈರೀಮಿಲ್ಕ್ ಚಾಕ್‌ಲೇಟ್‌ನ ಕೂಸ್‌ನ ಕೈಲಿ ಕೊಟ್ಟೆ, ಕೂಸ್ ಮರ್‌ಡುವ ಬದಲ್ ಚಾಕ್‌ಲೇಟ್‌ನ ನನ್ನ ಕೈ ಮೇಲೆ ಬೀಳ್ಸ್‌ಕಂಡ್, ತಿಂದ್‌ಕಂಡ್ ಇತ್ತ್. ಆದರೆ ಆ ಕೂಸ್‌ನ ನನ್ನ ತೊಡೆಲಿ ಕುದ್ದ್‌ರ್‌ಸಿದ ಮೇಲೆ ನನ್ನ ಮನಸ್ ಕೂಡ ಆ ಕೂಸ್‌ನ ಕಡೆ ಗಮನ ಸೆಳೆತಿತ್ತ್. ಸುಮಾರ್ ಕುಂಬ್ರ ಎತ್ತಿಕಾನ ಆ ಕೂಸ್‌ನ ಅಮ್ಮ ಸುದ್ದಿ ಇಲ್ಲದೇ ಆ ಬಸ್ಸ್‌ಂದ ಇಳ್‌ದ್ ಹೋದ. ಆ ಹೊತ್ತಿಗೆ ಬಸ್ಸ್‌ಲಿ ಇದ್ದ ಜನಂಗ ಎಲ್ಲಾ ನನ್ನ ನೋಡ್‌ತ, ಕೈ ತೋರಿಸಿ, ನನ್ನ ಬಗ್ಗೆನೇ ಮಾತಾಡಿಕಂಡ್ ಇದ್ದ. ಒಮ್ಮೆ ನಂಗೆ ತುಂಬಾ ಹೆದರಿಕೆ ಆತ್. ಏಕೆ ಇವೆಲ್ಲಾ ನನ್ನ ನೋಡಿಕಂಡ್ ನನ್ನ ಬಗ್ಗೆ ಮಾತಾಡಿಕಂಡ್ ಒಳತ, ಮತ್ತೆ ನನ್ನ ಹಕ್ಕಲೇ ಕುದ್ದ್‌ಕಂಡ್ ಇದ್ದ ಹೆಂಗಸ್ ವಿಷಯ ಹೇಳ್ತ್. ವಿಷಯ ತಿಳ್‌ದ

ನಂಗೆ ಒಂದ್ ಕ್ಷಣ ಎಂತ ಮಾಡೊಕೂತ ಗೊತ್ತಾತ್ಲೆ. ಮತ್ತೆ ನಾ ಕೂಡ ಆ ಬಸ್ಸ್‌ಂದ ಕೂಸ್‌ನ ತಕ್ಕೊಂಡ್ ಇಳ್ದೆ. ಬಸ್ಸ್‌ಂದ ಇಳ್‌ದ್ ಹುಡುಕಿರೆ ಆ ಹೆಂಗಸು ಕಾಂಬಲೆ, ಅಲ್ಲೇ ಹಕ್ಕಲೇ ಇದ್ದ ರಿಕ್ಷಾದವರ ಒಟ್ಟಿಗೆ ಕೇಳ್ದೆ, ಕೇಳಿಕಾನ ಹೇಳ್ದ ಆ ಹೆಂಗಸ್ ರಿಕ್ಷಾ ಮಾಡಿ ಹೋಗಿ 5 ನಿಮಿಷ ಆತಷ್ಟೇತ. ಮತ್ತೆ ನಾನು ಕೂಸ್‌ನು ಇನ್ನೊಂದು ರಿಕ್ಷಾ ಮಾಡಿ ಆ ಹೆಂಗಸ್ ಹೋದ ರಿಕ್ಷಾದ ಕಡೆನೇ ಹೋದ, ಹೋಗಿ ಹೋಗಿ ಸುಮಾರು ಕನಕಮಜಲಿಗೆ ಎತ್ತಿಕನ ಆ ಹೆಂಗಸು ಇರುವ ರಿಕ್ಷಾ ಸಿಕ್ಕಿತ್. ಆ ರಿಕ್ಷಾ ನಿಲ್ಸಿ ಹೆಂಗಸ್‌ನೊಟ್ಟಿಗೆ ಕೇಳಿಕಾನ ಆ ಹೆಂಗಸ್ ಹೇಳ್ತ್ "ಇದು ನನ್ನ ಕೂಸು ಅಲ್ಲ, ನೀವು ಯಾರ್ದ್ದ ಕೂಸ್‌ನ ನನ್ನ ಕೂಸ್‌ತ ಏಕೆ ಸುಮ್ಮನೆ ಹೇಳ್ದೊತ ಹೇಳ್ತ್" ಮತ್ತೆ ಆ ಹೆಂಗಸಿಗೂ ನಂಗೂ ಸುಮಾರ್ ಚರ್ಚೆ ಆತ್, ಆಕಾನ ರಿಕ್ಷಾ ಡ್ರೈವರ್ ಹೇಳ್ದ, "ನೀವು ಇಲ್ಲಿ ಚರ್ಚೆ ಮಾಡಿ ಸುಖ ಇಲ್ಲೆ, ಸೀದಾ ಪೋಲೀಸ್ ಸ್ಟೇಷನ್‌ಗೆ ಹೋಗಿ ಕಂಪ್ಲೆಂಟ್ ಕೊಡೀತ ಹೇಳ್ದ." ಅದಕ್ಕೆ ಇಬ್ಬರೂ ಒಪ್ಪಿಕಂಡ್ ಆ ಹೆಂಗಸ್ ಅವರ ರಿಕ್ಷಾಲಿ ನಾನು ಕೂಸ್‌ನು ನಾವು ಬಂದ ರಿಕ್ಷಾಲಿ ಪೋಲೀಸ್ ಸ್ಟೇಷನ್‌ಗೆ ಹೋದ. ಹೋಕಾನ ಕೂಸ್ ಮಾತ್ರ ಹೆಗ್‌ಲಲ್ಲಿ ಲಾಯಿಕ್ ನಿದ್ದೆ ಮಾಡಿತ್. ನಂತರ ಪೋಲೀಸ್ ಸ್ಟೇಷನ್‌ಗೆ ಹೋಗಿ ಎಸ್.ಐ.ನ ಹಕ್ಕಲೇ ನಡೆದ ವಿಷಯನ ಎಲ್ಲಾ ಹೇಳ್ದ. ಹೇಳಿಕಾನ ಎಸ್.ಐ. ಹೇಳ್ದ "ನವುಗೆ ಇನ್ನ್ ಒಂದು ದಾರಿ ಉಟ್ಟು, ಎಂತತೇಳಿರೇ ಇಬ್ಬೊರು ಒಂದೊಂದು ಚಾಕಲೇಟ್‌ನ ಹಿಡ್‌ಕಂಡ್ ಆಚೆ ಒಬ್ಬ, ಈಚೆ ಒಬ್ಬ ನಿಲ್ಲಿ, ನಡುಲಿ ಕೂಸ್‌ನ ನಿಲ್ಸಮಾ, ಇಬ್ಬರ್ ಕೂಸ್‌ನ ಕರೆಕು, ಕೂಸ್ ಯಾರ ಹಕ್ಕಲೇ ಹೋದೆ ಅದು ಅವರ ಕೂಸ್‌ತ ಹೇಳ್ದ". ನಾವಿಬ್ಬರೂ ಎಸ್. ಐ. ಹೇಳ್ದಂಗೆ ಮಾಡ್ದ, ಮಾಡಿಕಾನ ಕೂಸ್ ದುರಾದೃಷ್ಟ ನನ್ನ ಹಕ್ಕಲೇ ಓಡಿಬಾತ್. ಓಡಿಬಾಕನ ಎಸ್.ಐ, "ನನ್ನ ಕೂಸ್ ಅಲ್ಲತ ಯಾಕೆ ಸುಳ್ಳ್ ಹೇಳ್ದ್‌ತ ನನ್ನ ಕೆಪ್ಪೆಗೆ ಒಂದು ಪೆಟ್ಟು ಹೊಡ್ದ್ ಆಕನ ಒಮ್ಮೆಲೇ ಎಚ್ಚರ ಆತ್, ಎದ್ದು ನೋಡಿಕಾನ ಬೆಳಿಗ್ಗೆ ಆರ್ ಗಂಟೆ, ನಡೆದದೆಲ್ಲಾ ಬರೀ ಕನಸ್ ಮಾತ್ರ!!!!

✍ಭವ್ಯಶ್ರೀ ಕರಂಗಲ್ಲು,

**ಮಕ್ಕಳಿಗಾಗಿ**

# ಅತಿ ಆಸೆ ಬೇಡವೇ ಬೇಡ

ಒಂದಾನೊಂದು ಕಾಲಲಿ ದೇವರು ಮತ್ತು ರಾಜ ಒಂದೇ ಊರಲಿ ವಾಸ ಮಾಡ್ತಿದ್ದೊ ಗಡ. ಒಮ್ಮೆ ದೇವ್ರಿಗೆ ಕಷ್ಟ ಎದ್‌ರಾತ್. ಆಗ ಆ ಊರ್‍ನ ರಾಜ ದೇವರ ಸಹಾಯಕ್ಕೆ ಬಾತ್. ಕಷ್ಟದ ಸಮಯಲಿ ಸಹಾಯ ಮಾಡ್ದ ರಾಜಂಗೆ ಏನಾದ್ರೂ ಪ್ರತಿಫಲ ಕೊಡಕೂಂತ ದೇವರು, ರಾಜ ಇದ್ದಲ್ಲಿಗೆ ಬಂದ್ ನೀನ್ ನಂಗೆ ಸಹಾಯ ಮಾಡ್ದ್ಯೊಳ. ಹಂಗಾಗಿ ನಿಂಗೆ ಏನ್ ವರ ಬೇಕ್ ಕೇಳ್. ನಾನ್ ಇಲ್ಲೆ ಎನ್ನದೆ ವರ ಕೊಟ್ಟನೆಂತ ದೇವ್ರು ಹೇಳ್ತ್. ಆಗ ರಾಜ ದೇವರ್‍ಲಿ ಏನ್ ವರ ಕೇಳ್ಲೂಂತ ಯೋಚ್ನೆ ಮಾಡ್ತ್. ರಾಜಂಗೆ ಚಿನ್ನ, ವಜ್ರ, ವೈಢೂರ್ಯದ ಹುಚ್ಚು ಹೆಚ್ಚೇ ಇತ್ತ್. ಇನ್ನೇನ್ ದೇವ್ರು ವರ ಕೊಟ್ಟವೆ. ನಾನ್ ದೊಡ್ಡ ವರನೇ ಕೇಳಿಬುಟ್ಟನೇಂತ ರಾಜ ನಿರ್ಧರಿಸಿದೆ.

ದೇವ್ರೆ ನಾನ್ ಮುಟ್ಟಿದ್ದೆಲ್ಲ ಚಿನ್ನ ಆಗುವಂಥ ವರ ಕೊಡು ಅಂತ ರಾಜ ಬೇಡಿಕಂಡತ್. ಅದ್ನೆ ದೇವ್ರು ತಥಾಸ್ತು ಹೇಳಿ ಮಾಯ ಆತ್.

ರಾಜಂಗೆ ದೇವ್ರು ಕೊಟ್ಟ ವರನ ಪರೀಕ್ಷಿಸುವ ಕುತೂಹಲ ಆತ್. ರಾಜ ಅರಮನೆಯ ಕಡೆ ನಡ್ಕಂಡ್ ಹೋಕನ ಒಂದು ಕಲ್ಲ್‌ನ ಬೆರಳಿಂದ ಮುಟ್ಟಿದ ಕೂಡ್ಲೆ ಆ ಕಲ್ಲ್ ಬಂಗಾರದ ಗುಂಡಾತ್. ರಾಜಂಗೆ ಆಶ್ಚರ್ಯ, ಖುಷಿ ಎಲ್ಲಾ ಆತ್. ರಾಜ ಅವಸರ ಅವಸರಂದ ಅರಮನೆ ಮೆಟ್ಟಿಲುನ ಮುಟ್ಟುತ್ತಾ ಹತ್ತಿದ. ಮೆಟ್ಟಿಲ್ಲಾ ಬಂಗಾರದ ಮೆಟ್ಲಾತ್. ಅರಮನೆ ಬಾಗಿಲು, ಹೂಕುಂಡ, ಸಿಂಹಾಸನ ಹೀಗೆ ಎಲ್ಲಾ ಮುಟ್ಟಿದ್ದೆಲ್ಲಾ ಬಂಗಾರ ಆಗಿ ಇಡೀ ಅರಮನೆಯೇ ಬಂಗಾರ ಆತ್. ರಾಜನ ಖುಷಿಗೆ ಅಂತ್ಯವೇ ಇಲ್ಲೆ. ಇಡೀ ಪ್ರಪಂಚಕ್ಕೇ ನಾನೇ ಶ್ರೀಮಂತ ರಾಜಂತೇಳಿ ಜಂಭಂದ ಉಬ್ಬಿ ಹೋದ. ಅಷ್ಟೊತ್ತಿಗೆ ಒಳಗಿಂದ ರಾಜನ ಏಕಮಾತ್ರ ಪುತ್ರಿ ಅಪ್ಪಾಂತೇಳಿ ಓಡಿಕಂಡ್ ಬಂದದೆ. ಆಗ ಅಪ್ಪ ಪ್ರೀತಿಂದ ಮಗಳ್ನ ಅಪ್ಪಿಕಂಡದೆ. ಆಗ ಮಗಳ್ ನಿರ್ಜೀವವಾಗಿ ಬಂಗಾರದ ಕಲ್ಲಾದೆ. ರಾಜಂಗೆ ಆಘಾತ ಆದೆ. ಮಗಳೆ, ಮಗಳೇಂತೇಳಿ ಎಷ್ಟು ಅಲ್ಲಾಡಿಸಿರೂ ಮಗಳು ಜೀವ ಇಲ್ಲೆ. ಬಂಗಾರದ ಮೂರ್ತಿ ಆದೆ. ಆಗ ರಾಜಂಗೆ ಬೇಜಾರಾದೆ. ಮಗಳಿಗಾದ ಸ್ಥಿತಿ ನೋಡಿ ರಾಜ ಮರ್‍ಗದೆ. ಹಂಗೇನೆ ರಾಜಂಗೆ ಹಸಿವೇನೂ ಆದೆ.

ತಿಂಬಕೆ ಪಕ್ಕದ ಸೇಬು ಹಣ್ಣಿನ ಬುಟ್ಟಿಗೆ ಕೈ ಹಾಕಿದೆ. ಆಗ ಆ ಸೇಬು

ಹಣ್ಣೆಲ್ಲಾ ಬಂಗಾರ ಆತ್. ತಿನ್ನಕ್ಕೂಂತ ಮುಟ್ಟಿದ ಪದಾರ್ಥ ಎಲ್ಲ ಬಂಗಾರ ಆದೆ.

ಆಗ ರಾಜಂಗೆ ತಾನ್ ಮಾಡ್ದ ತಪ್ಪುನ ಅರಿವಾದೆ. ಮತ್ತೆ ರಾಜ ಪುನಃ ದೇವರ್ನ ಪ್ರಾರ್ಥಿಸಿದೆ. ಕೇವಲ ಬಂಗಾರಂದ ಬೊದ್ಕಿಕೆ ಸಾಧ್ಯ ಇಲ್ಲೆ. ಬಂಗಾರದ ಆಸೆಂದ ಇದ್ದ ಒಬ್ಬಳೇ ಮಗಳ್ನ ನಿರ್ಜೀವ ಮಾಡ್ದೆ. ಈಗ ಅರಮನೆಯೆಲ್ಲಾ ಬಂಗಾರ ಆಗುಟ್ಟು. ಹಸಿವೆ ಆದರೂ ತಿಂಬಕಾದ್ಲೆ. ಮುಟ್ಟಿದೆಲ್ಲಾ ಚಿನ್ನ ಆದೆ.

ರಾಜ ತನ್ನ ತಪ್ಪಿನ ಅರಿವಾಗಿ ಪುನಃ ದೇವರ್ನ ಪ್ರಾರ್ಥಿಸಿದೆ.

ದೇವರೇ ನಾನ್ ಬಂಗಾರದ ಮೇಲಿನ ಆಸೆಂದ "ಮುಟ್ಟಿದ್ದೆಲ್ಲಾ ಬಂಗಾರವಾಗುವಂಥ" ವರ ಕೇಳಿ ತಪ್ಪು ಮಾಡಿದೆ. ದಯಮಾಡಿ ನೀನ್ ಕೊಟ್ಟ ವರನ ವಾಪಾಸ್ಸು ತೆಕೊ" ಅಂತ ದುಃಖದಿಂದ ದೇವರ್ನ ಬೇಡಿಕಂಡತ್.

ದೇವರು ಪ್ರತ್ಯಕ್ಷ ಆಗಿ ನೀನ್ ಅರಮನೆಯ ಮುಂದೆ ಹರಿಯುತ್ತಿರುವ ಹೊಳೆಯಿಂದ ನೀರ್ನ ತಂದ್ ನೀನ್ ಮುಟ್ಟಿದ ವಸ್ತುಗಳ ಮೇಲೆಲ್ಲಾ ನೀರ್‌ನ ಚಿಮುಕಿಸು. ನಾನ್ ಕೊಟ್ಟಿರುವ ವರ ನಾಶ ಆದೆಂತೇಳಿ ಮಾಯ ಆದೆ. ರಾಜ ತಡಮಾಡದೇ ಹೊಳೆಗೆ ಇಳ್ದ್ ಅಲ್ಲಿಂದ ನೀರ್ನ ತಂದ್ ಬಂಗಾರ ಆದ ಕಡೆ ಎಲ್ಲಾ ಚಿಮುಕಿಸಿದ. ಅದೆಲ್ಲಾ ಮುಂದಿನಂತೆ ಬದಲಾತ್. ಹಾಂಗೆ ಬಂಗಾರದ ಶಿಲೆಯಾದ ಮಗಳ ಮೇಲೆ ನೀರು ಚಿಮುಕಿಸಿದ. ತಕ್ಷಣ ಮಗಳು ಅಪ್ಪನನ್ನು ತಬ್ಬಿಕಂಡದೆ. ಹೀಗೆ ದೇವರು ಕೊಟ್ಟ ವರ ನಾಶ ಆತ್. ಇದರಿಂದ ಪಾಠ ಕಲ್ತ ರಾಜ ತನ್ನ ಅರಮನೆಲಿ ಕೂಡಿಟ್ಟ ಹಣ, ಆಭರಣ ಎಲ್ಲಾ ದಾನ ಮಾಡಿ ಸರಳವಾಗಿ ಬೊದ್ಕಿದೆ. ಅತಿ ಆಸೆಂತೇಳುದು ಮನುಷ್ಯನ ಕೊಂದದೆ. ಅವನಿಂದ ಎಲ್ಲವನ್ನೂ ಕಿತ್ತ್‌ಕಂಡದೆ. ಹಿಂಗಾಗಿ ನಮ್ಮಲ್ಲಿ ಏನುಟ್ಟೋ ಅಷ್ಟರಲ್ಲೇ ತೃಪ್ತಿಯಿಟ್ಟು ಬೊದ್ಕಿರೆ ನಮ್ಗೆ ನೆಮ್ಮದಿ ಹಾಗೂ ಸಂತಸದ ಜೀವನ ಕಂಡ್‌ಕಣಿಕೆ ಸಾಧ್ಯ ಆದೆ.

✍ಅಂಬೆಕಲ್ಲು ಸುಶೀಲ ಕುಶಾಲಪ್ಪ

**ಕವನ ಜೊಂಪೆ**

# ಅರೆಭಾಷೆಗೆ ಹೋರಾಡ್

ಅರೆಭಾಷೆಗೆ ಹೋರಾಡ್ ಅರೆಭಾಷೆನ ಕಂದ
ಅರೆಭಾಷೆನ ಕಾಪಾಡ್ ನಮ್ಮ ಆನಂದ
ಜೋಗುಳದ ಭಾಷೆ ಇದ್, ಮರಿಬೇಡಿ ಚಿನ್ನ
ಮರತ್ ಬುಟ್ಟರೆ ಅಯ್ಯೋ ಮರ್ತಂಗೆ ನಮ್ಮ
ಅರೆಭಾಷೆ ನಮ್ಮ ಅವ್ವನ ಭಾಷೆ ಕಂದ
ನಾವೆಲ್ಲ ಅವ್ವನ ಕರುಳ್ಂದ ತುಂಡಾಗಿ ಬಂದವು ಚಿನ್ನ
ಅರೆಭಾಷೆ ಕರಳ್‌ನ ಭಾಷೆಂತ ಹೇಳಿಕೆ ಮರಿಬ್ಯಾಡ ಕಂದ
ಅವರವರ ಭಾಷೆ ಅವರವರ ಕರುಳಿನ ಭಾಷೆ
ಇಂಗ್ಲೀಷ್ ಮತ್ತೆ ಇನ್ನಿತರ ಭಾಷೆಗ ನಮಿಗೆ ಕೊರಳಿನ ಭಾಷೆ
ಇದ್ ನನ್ನ ಬಾಯಿಂದ ಬಂದ ಮಾತಲ್ಲ ಕಂದ
ಇದ್ ಸಾಹಿತಿ ಹಂಪ ನಾಗರಾಜಯ್ಯನವರ ನೆನಪಿನ ಜಂಪೆ
ಹೆತ್ತ ಅವ್ವನೇ ನಮ್ಮ ದೇವರು ಕಂದ
ಭಾಷೆನ ಮರ್‌ತರೆ ಹೆತ್ತವ್ವನ ಮರ್ತಂಗೆ ಚಿನ್ನ
ಅರೆಭಾಷೆನ ಜನಾಂಗ ಹೊಟ್ಟೆನ ತುಂಬುಸುವೆ ಕಂದ
ಇಂಗ್ಲೀಷ್ ಭಾಷೆನವು ಜೋಬುನ ತುಂಬಿಸಿವೆ ಚಿನ್ನ
ಎಲ್ಲಾ ಭಾಷೆಗಳ ಪ್ರೀತಿಸುದ್ ನಮ್ಮ ಧರ್ಮ
ಇಂದಿನ ಯುವಕ ಯುವತಿಯರ್ ಮಕ್ಕಳೊಟ್ಟಿಗೆ ಕನ್ನಡ ಮಾತಾಡ್ದು ನಮ್ಮ ಕರ್ಮ
ಮನೆ ಮಂದಿಯೆಲ್ಲಾ ಮಕ್ಕಳಿಗೆ ಅರೆಭಾಷೆನ ಕಲ್ಸೊದು ವರದಾನ
ಭಾಷೆ ಉಳ್ದರೆ ಜನಾಂಗ ಉಳಿದಂಗೆ ಕಂದ
ಅರೆಭಾಷೆನ ಕೊಲ್ಲಿಕೆ ಮುಂದೆ ನನ್ನನ್ನೇ ಕೊಲ್ಲಿ.

✍ಕಟ್ರತನ ಕೆ. ಬೆಳ್ಯಪ್ಪ

# ಹಳ್ಳಿ ಬೊದ್‌ಕ್

ಹೊತ್ತ್ ಮುಳ್‌ಂಗಿತ್ ಸೂರ್ಯ ಅಣ್ಗಿತ್
ಕತ್ತಲಾತ್‌ಂತ ಸೂಚನೆ।
ದುಡಿವ ಹಳ್ಳಿನ ರೈತ ಜನಕೆ
ಕೆಲ್ಸ ನಾಳೆದೆ ಯೋಚನೆ॥
ಭತ್ತ ಒಣಗಿದ್ ಎದ್ದ್ ಕಂಡದೆ
ಕೊಯ್ಯಕುಟ್ಟು ಗದ್ದೆಲಿ
ಗದ್ದೆ ಕೊಯಿಲ್‌ಗೆ ಜನಂಗ ಸೇರಿವೆ
ನೆರೆಕರೆವು ಒಗ್ಗಟ್ಟ್‌ಲಿ॥
ಬಿದ್ದ ಭತ್ತನ ಕೊಡ್‌ಪಿ ತಿಂದವೆ
ಕೋಳಿಗಳಿಗೆಲ್ಲ ಹಬ್ಬನೆ।
ನೋಡಿ ಹಕ್ಕಿಗಳ ಹಿಂಡ್ ಬಂದದೆ
ನೋಡಿಕೆನು ಅದ್ ಚಂದನೆ॥
ಅವ್ವ ಕರ್‌ಬುಡಿಕೋದು ಹಟ್ಟಿಗೆ
ಕೆಲ್ಸ ಒಬ್ಬಂಗದ್ ಕಷ್ಟನೆ।
ಸಿಕ್ಕುದು ಹಾಲ್ ಕೊಂಡೆಲೆಕ್ಕಲಿ
ಕುಡೆಕೆ ಸಮ ಅದ್ ಅಮೃತನೆ॥
ಅಡ್ಕೆ ಹೆರ್‍ಕೊಕು ಕಾಯಿ ಕೀಳೊಕು
ಬೀಜದಣ್ಣ್‌ಗ ಬಿದ್ದುಟು।
ಇರುವ ಕೆಲ್ಸನ ಮಾಡಿಕಾಗದೆ
ಅಪ್ಪಂಗೆ ತಲೆ ಕೆಟ್ಟುಟ್ಟು॥
ಇರುವ ಗಂಡ್ ಮಂಜ ಒಬ್ಬನೆ
ಶಾಲೆಗೆ ಅಂವ ಹೋಗುಟು।
ಕೆಲ್ಸ ಮಾಡಿದ್ ಮುಗಿದು ಯಾಗಂತ
ಅವ್ವ ಚಿಂತಿಸಿ ಕುದ್ದುಟು॥
ಇರುವ ಅಜ್ಜಿ ಮನೆನ ಸುತ್ತ
ಕುಂಟು ಮಾಯ್ಪುಲಿ ಗುಡ್ಸುದು।
ಸಣ್ಣ ಕೂಸ್‌ನ ಮೀಸಿ ಊಡ್ಸಿದ್
ನಿದ್ದೆ ಅದ್ಕೆ ಮಾಡ್ಸುದು॥
ಹಳ್ಳಿ ಕೆಲ್ಸನ ಮಾಡಿಕಿಂದ್
ಜನಂಗ ಯಾರೂ ಸಿಕ್ಕುದುಲೆ।
ದುಡಿದು ಒಂದೆ ಜನರ ಕೆಲ್ಸ
ಸತ್ತರೆನು ಯಾರೂ ಕೇಳ್ದುಲೆ॥

ಹಳ್ಳಿ ಜೀವನ ಕಷ್ಟ ಉಟ್ಟುಂತ
ಪೇಟೆ ಜನಕೆಲ್ಲಿ ಗೊತ್ತುಟು।
ಹಳ್ಳಿ ಜನಂಗಳೆ ಸಾಕ್ಷಿ ಹಳ್ಳಿಗೆ
ಬೇರೆ ಹೇಳಿಕೆ ಏನುಟ್ಟು?
ನೋಡಿ ಹಳ್ಳಿಲಿ ಜನರ ಹಣೆಬರ
ಹೇಂಗೆ ಬೊದ್ಕುದು ಹಳ್ಳಿಲಿ!
ಹಳ್ಳಿ ಬಾಳ್‌ನ ಸುಖಂತ ಹೇಳಿವೆ
ಪೇಟೆ ಜನಂಗ ಬಾಯಿಲಿ॥
ಬೆಳ್ದ ತರಕಾರಿ ಏನೇ ಇರ್‍ಲಿ
ರೈತಂಗೆ ಬೆಲೆ ಸಿಕ್ಕುದುಲೆ।
ಹಳ್ಳಿಲಿಂದ್ ಭೂಮಿ ಇದ್ದರು
ಬೊದ್ಕಿಕೆ ಕಸ್ಟ ಉಟ್ಟು ಆಕಿಲೆ॥
ಕೊಳವೆ ಬಾಮಿನ ಕೊರ್‍ದ್ ಕೊರ್‍ದ್
ಕೆರೆಲಿರುವ ನೀರುನು ಆರಿದೆ।
ಗದ್ದೆ ತೋಟಕು ನೀರ್ ಇಲ್ಲದೆ
ತೋಟ ಬಿಸ್‌ಲ್‌ಗೆ ಒಣಗಿದೆ॥
ಐದ್ ಎಕ್ರೆನೊ ಐನೂರ್ ಎಕ್ರೆನೊ
ಭೂಮಿದ್ದೇನ್ ಪ್ರಯೋಜನ।
ನೀರ್ ಇಲ್ಲದ ಬರಡ್ ಭೂಮಿಲಿ
ಹೇಂಗೆ ಬೊದ್ಕುದು ಈ ಜನ॥
ಕೂಲಿ ಕೆಲ್ಸಕೆ ಜನಂಗ ಹೋದರೆ
ಊಟ ಕೊಟ್ಟ್‌ದ್ ಸಂಬಳ।
ಕೊಡೊಕು ಐದ್ ನೂರರಾಜತೆ
ಬ್ರಾಂಡಿ ಕುಪ್ಪಿನು ಒಂದರ॥
ಕೆಲಸಕಾಳ್‌ಗ ಕರ್ದ್ ಬಂದರೆ
ಹತ್ತ್ ಗಂಟೆಗೆ ತಿಂಡಿ-ಕಾಫಿನೂ
ಕೊಡೊಕು ಕೆಲ್ಸ ನಿಲ್ಸಿ ಹೋಕನ
ಕಾರೊ ಜೀಪುಲಿ ಡ್ರೋಪುನು॥
ಹೀಂಗೆ ಇದ್ದರೆ ಬೊದ್ಕುದೇಂಗೆ
ಆದೊ ಬೊದ್ಕಿಕೆ ಹಳ್ಳಿಲಿ।
ಹಳ್ಳಿ ಬುಟ್ಟ್‌ದ್ ಜನ ಪೇಟೆ ಸೇರಿವೆ
ಬೊದ್ಕಿಕಾಗದೆ ಹಳ್ಳಿಲೀ।
ದೇಶ ಜನಕೆಲ್ಲ ಊಟ ಕೊಡೊವು
ದುಡಿವ ರೈತರ್ ಮಾತ್ರನೆ।

ಅಂತ ರೈತಂಗೆ ಇಂದ್ ದೊಡ್ಡವು
ಮಾಡುದೆಲ್ಲ ಬರಿ ಮೋಸನೆ॥
ಯಜಮಾನ ಆಸ್ತಿಗಿಂದ್
ಕೆಲಸದವನೊ ಭೂ ಒಡೆಯನೊ?।
ಇಸ್ಟ್ ಸಂಬಳ ತಕಂಡ್ ಉಂಬವ
ಕೂಲಿ ಮಾಡವ ಬಡವನೊ?
ಹಳ್ಳಿ ಬೊದ್ಕ್‌ನ ಹಾಡ್ ಬರ್ದೊಳೆ
ಸಣ್ಣದಾಗಿ ಈ ಹಾಡ್‌ನ।
ಬರೆಕೆ ಹೋದರೆ ಎಸ್ಟೊ ಉಟ್ಟು
ಬರ್ದರೂ ಇಲ್ಲೆ ಪ್ರಯೋಜನ॥

✍ಭವಾನಿಶಂಕರ್ ಹೊದ್ದೆಟ್ಟಿ

## ಗೂಡೆ ಪರಾರಿ!

ಸುದ್ದಿ ಬಾತ್ ಪೇಪರ್‌ನ ಎದ್ರ್ ಪುಟಲಿ
ನೆರೆಕರೆ ಗೂಡೆ ಹೈದ ಪರಾರಿ ಆಗೊಳೊ ರೈಲ್‌ಲಿ
ದೂರು ಹೋತ್ ಹಕ್ಕಲೆನ ಪೋಲಿಸ್ ಟೇಸನಲಿ
ಫೋಟೊ ಬಾತ್ ಊರ್‌ನ ಎಲ್ಲ ಟಿ.ವಿ ಚನಲಿಲಿ
ಗೋಧಿ ಬಣ್ಣ ಎತ್ತರದ ಉರುಂಟು ಮುಖ
ಕಟ್ಟ್ ಮಾಡಿಟು ಕೂದಲ್ ಮುಚ್ಚುವಾಂಗೆ ಮುಕ
ಕೈಲಿ ವುಟ್ಟು ಬಣ್ಣ ಬಣ್ಣದ ಸ್ಮಾರ್ಟ್ ಫೋನ್
ನಡ್ದರೆ ಕಂಡದೆ ಅವಳ ಬೆನ್ನ್ ಹನಿಯ ಗೂನು
ಪೋಲೀಸ್ ಹುಡ್ಕಿದೊ ಬಸ್ ರೈಲ್ ರಿಕ್ಷಾ ನಿಲ್ದಾಣ
ಕಡೆಗೆ ಬಂದೊ ನೋಡಿಕೆ ಇಮಾನ ನಿಲ್ದಾಣ,
ಕಂಡತಲ್ಲಿ ಹತ್ತಿಕೆ ಇಂಡಿಗೋ ಆ ಕ್ಷಣ.
ಸಿಕ್ಕಿತಿಲ್ಲೆ ಪೋಲಿಸಿಗೆ ಹಿಡೆಕೆ ಅವಳ ಅಂದ್
ಎರ್ಡ್ ದಿನಲಿ ಸುದ್ದಿ ಬಾತ್ ಒಂದು ವಿಚಿತ್ರದ್ದ್
ಗೆದ್ದ್ ಪಡ್ತ್ ಚಿನ್ನದ ಪದಕ ಪ್ಯಾರಾ ಒಲಿಂಪಿಕ್ಸ್‌ಲಿ
ಗೂಡೆ ಮಾಡ್ತ್ ದೊಡ್ಡ ಹೆಸ್ರ್ ದೂರದ ವಿದೇಸಲಿ
ಕೇಳಿ ಬಾತ್ ಸುಭಾಸಯ ಎಲ್ಲ ಟಿ.ವಿ. ಚನಲಿಲಿ
ಆತ್ ಜನಕೆ, ನಾವು ಮಾಡ್ದ್ ದೊಡ್ಡ ತಪ್ಪು ಮನ್ಸಿಲಿ
ತಲೆ ಬೊಗ್ಗಿ ಕುದ್ದೊ ಜನ ಕೇಳಿ ಕ್ಷಮೆ ಟಿ.ವಿ.ಲಿ.

✍'ವ್ಯಾಸ'

# ಮಳೆಲಿ ಪ್ರವಾಸಿಗರ್

ಆಡಿ ಕೂಡಿ ರಭಸದ ಮಳೆ ಈ ಸಾರಿ
ಕರಿ ಮೋಡ ಕವ್‌ದುಟ್ಟು ಬೆಳಿ ನೀಲ ಬಾನ್‌ಲಿ॥
ಕಾರ್ತಿಂಗ ದಾಟಿ ಹೋತು ದೆವ್ವಕೆ ಕೊಡ್ದು ನಿತ್ತೋತು
ಯಾಕ್‌ಲ್‌ಗೆ ನೀರ್ ಜ್ಯಾಸ್ತಿ ಆತ್। ಹಾಕಿದ ಬೀಜ ಕರ್‌ಗಿತ್॥
ಗದ್ದೆ ಪುಣಿ ಕಡ್‌ತ್‌ಲೆ। ಟ್ರಾಕ್ಟರ್ ಟಿಲ್ಲರ್ ಬಾಕುಟ್ಟು
ಎತ್ತ್‌ಗಯಿಲ್ಲೆಂತೇಳಿ ನಿಧಾನ ಹೂಡಿ ದುಡ್ಡುನು ಮಾಡಿಕುಟ್ಟು॥
ಅಯ್ಯೋ–ಮಳೆ ಬರ್‌ತಾನೆವುಟ್ಟಲೆ....
ಕೆಲ್‌ಸನೂ ಮಾಡಿಕಾದುಲೆ ನಾವ್‌ಗೆ॥
ಪ್ಯಾಟೆಲಿ ನೋಡ್‌ರೆ ಪ್ರವಾಸಿಗರ ದಂಡ್
ಇದೆಲ್ಲಾ ನೋಡಿಕೆ ರೈತರಿಗಿತ್ತಾ ಪಂಡ್?
ಮಳೆಲಿ ಅವುಕೆ ಕೆಲ್‌ಸಾ... ಇಲ್ಲೇನ್?
ಅವರ ಊರ್‌ಲಿ ಬಾರಿ ಬಿಸ್‌ಲೇ ಬಿಸ್‌ಲ್‌ಗಡ!!
ಉಷ್ಣಾಂಶ ಜ್ಯಾಸ್ತಿವುಟ್ಟುಗಡ!!
ಮನ್ಸ್‌ನ ತಂಪು ಮಾಡಿಕೆ ಮಳೆ ನೋಡಿಕೆ
ಬಂದೊಳೊ ಗಡ.. ನಗರಲಿ ಇರ್‌ವ ಪಿಳ್ಳಿನ
ಮಾತ್‌ಕೇಳಿ ಇಲ್ಲಿಗೆ ಬಂದೊಳೊ ಗಡಾ....!!
ಅವ್ವ ಹೇಳ್‌ದ ಬೆದ್‌ರ್‌ನ ಕೈತಾಂಗ ಪಾಲನ ಮಾತ್ರ
ಒಮ್ಮೆ ನೋಡೊಕು ಅವುಕೆ ಗಡಾ...॥
ಸರಿ ಸರಿ ಆರೋಪ ಅವ್ವನ ಮ್ಯಾಲೆ ಹಾಕ್‌ಬಡಿ
ಪಾಲದ ಕೊಡಿಲಿ ನಿತ್ತ್ ಸೆಲ್ಫಿ ಫೋಟೊ ಮಾತ್ರ ತೆಗಿಬಡಿ॥
ಅಂದ್ ರಜಲಿ ಬಂದ ಮಕ್ಕ ಹೊಳೆಕರೆ ಬಯ್ಯ ಮರಲಿ
ಚಿಗ್‌ರಿಕಂಡಿದ್ದ ಸೀತೆ ಹೂ ಗಿಡನ ಕಿತ್ತ್ ತಂದಿದ್ದೊ॥
ಅದರ್‌ನ ಚೆಟ್ಟಿಲಿ ನೆಟ್ಟ್ ಮಡ್‌ಗ್ಯುಟ್ಟು ಅವ್ವಾ..!
ಸೀತೆ ಹೂ ಗೊಂಚಲ್ ಪೊರ್ಲುನ ನೋಡಿ ಒಮ್ಮೆ
ಬೇಕಾರೆ ಸೆಲ್ಫಿ ಫೋಟೊ ತೆಗ್‌ಸಿಕಣಿ ಅಲ್ಲೆ
ಸೆಲ್ಫಿ ಫೋಟ ತೆಗ್‌ಸಿಕಣಿ ಅಲ್ಲೆ, ತೆಗ್‌ಸಿಕಣಿ ಅಲ್ಲೆ॥

✍ಬೈತಡ್ಕ ಜಾನಕಿ ಬೆಳ್ಯಪ್ಪ

# ನೆಂಪು

ನಂಗೆ ನೆಂಪಾದೆ ಚಡ್ಡಿ ಹಾಕಂಡಿದ್ದ ಪ್ರಾಯ
ಮನೆ, ಶಾಲೆ, ಗದ್ದೆ, ತೋಟ ಮಾತ್ರ ಗೊತ್ತಿದ್ದ ಸಮಯ
ಮನೆಲಿ ತುಂಬಾ ಜನಂಗ ಎಲ್ಲವುಕೂ ನಾ ಅಪ್ಪಿಯ
ಶಾಲೆಗೆ ಹೋದೇ ನಂಗಿದ್ದ ಕೆಲಸಯ
ಆಟ ಆಡುದೆ ನಾವುಗಿದ್ದ ಮಜಯ
ವರ್ಷಕ್ಕೆ ಎರಡ್ ಸಲ ದೊಡ್ಡ ರಜೆಯಾ
ಹಬ್ಬಕ್ಕೆ ಹೊಸ ಬಟ್ಟೆ ಹಾಕುದೇ ಗಮ್ಮತ್ತ್‌ಯಾ
ದೀಪಾವಳಿ, ಖೆಡ್ಡಸ, ಬಿಸು, ಹೊಸ್ತ್ ನಮ್ಮ ಹಬ್ಬಗಯ
ತಿಂಬೊದ್, ಉಂಬೊದ್, ಚಾಮಿಗೆ ಕೈಮುಗಿದ್ ನಾವುಗೆ ಖುಷಿಯ
ಗೋಲಿ, ಕುಟ್ಟಿದೊಣ್ಣೆ, ಬುಗುರಿ ನಮ್ಮ ಆಟಗಯ
ಬೀಜ ಹೆಕ್ಕುದ್, ಅಡಿಕೆ ಸುಲಿದ್, ಮರ ಹತ್ತುದ್ ನಮ್ಮ ವ್ಯವಸಾಯ
ಉಂಬೆ, ನಾಯಿ, ಕೊತ್ತಿ, ಕೋಳಿ ನಮ್ಮ ಒಡನಾಡಿಗಯ
ಜಿಲೇಬಿ, ಲಾಡ್, ಹೋಳಿಗೆ, ತಂಬಿಟ್ಟ್ ನಮ್ಮ ತಿಂಡಿಗಯ
ಅಪ್ಪದಿಟ್ಟ್, ಹುಳಿದೋಸೆ, ನೀರ್‌ದೋಸೆ, ಬಡ್‌ರೊಟ್ಟಿ ನಮ್ಮ ಹಿಟ್ಟ್‌ಗಯ
ಕಷಾಯ, ಬೆಲ್ಲಕಾಫಿ, ಕಣ್ಣಚಾಯ, ನೀರುಳ್ಳಿ ಶರಬತ್ತ್ ನಮ್ಮ ಪಾನೀಯ
ಅಜ್ಜ ಅಜ್ಜಿ ಹೇಳ್‌ತಿದ್ದೊ ಒಳ್ಳೆ ಕಥೆಗಳಯ
ರಾಮಾಯಣ, ಮಹಾಭಾರತ ಎಲ್ಲ ನಮ್ಮ ಬಾಯಿ ತುದಿಲಿಯ
ನಂಗೆ ನೆಂಪಾದೆ ಚಡ್ಡಿ ಹಾಕಂಡಿದ್ದ ಪ್ರಾಯ
ಇನ್ನೆಂದೂ ಬಾದುಲೆ ಆ ಪೊರ್ಲುನ ದಿನಗಯ

✍ಡಾ। ಜ್ಞಾನೇಶ್ ಎನ್.ಎ.

# ನಾಡಪ್ರಭು ಕೆಂಪೇಗೌಡ



ಓ ರಾಜಾಧಿರಾಜ ಮಹಾರಾಜ ಕೆಂಪೇಗೌಡರೆ
ಓ ಬೆಂಗಳೂರು ಮಹಾನಗರದ ಸೃಷ್ಟಿಕರ್ತರೆ,
ನೀವಿಗೆ ನಮ್ಮೆಲ್ಲರ ಪ್ರಣಾಮಗ
ನಿಮ್ಮ ದಿವ್ಯ ದೃಷ್ಟಿಗೆ, ನಿಮ್ಮ ಭವ್ಯ ಚಿಂತನೆಗೆ,
ಹುಟ್ಟಿಟು ಬೆಂಗಳೂರು ಮಹಾನಗರ.
ಅದೇ ನಿಮ್ಮ ದಿವ್ಯ ಕಲ್ಪನೆಯ ಸುಂದರ ನಗರ.
ಇಂದ್ ನೀವಿದ್ದಿದ್ದರೆ ಅದೆಷ್ಟ್ ಕುಸಿ ಆತಿತ್ ನಮಿಗೆ
ಅದೆಷ್ಟಂತ ನಂಗೆ ಹೇಳಿಕಾದ್‌ಲೆ ನಿಮಗೆ ಎಂದೆಂದಿಗೂ,
ಧರೆಗಿಳಿದು ಓಡೋಡಿ ಬನ್ನಿ ನಮ್ಮ ಕರೆಗೆ॥
ಅಂದ್ ನೀವು ಕಟ್ಟೊಳರಿ ಎಷ್ಟೋ ಕೆರೆಕುಂಟೆಗಳ
ಕಟ್ಟೊಳರಿ ಅದೆಷ್ಟೊ ಕೋಟೆಗಳ
ಕಟ್ಟೊಳರಿ ಎಷ್ಟೊ ದೇವಸ್ಥಾನಗಳ
ಮಠಗಳ, ಧರ್ಮಶಾಲೆಗಳ, ಅಗ್ರಹಾರಗಳ ಛತ್ರಗಳ
ಈ ಮಹಾ–ಮಹಾ ಕಾರ್ಯಗಳಿಗೆಲ್ಲಾ ನೀವೇ ಸ್ಫೂರ್ತಿ
ಅದಕ್ಕೆ ಸೇರೊಕು ನಿಮಗೆ ಎಲ್ಲಾ ಕೀರ್ತಿ,
ಓ ನಾಡಪ್ರಭು ನಿಮಗೆ ನಮ್ಮೆಲ್ಲರ ಪ್ರೀತಿ॥
ನೀವಾಗಿದ್ದರಿ ಎಲ್ಲಾ ಧರ್ಮಗಳ ಹಿತಚಿಂತಕರ್,
ನೀವಾಗಿದ್ದರಿ ಅವುಗಳೆಲ್ಲರ ಕರುಣಾಮಯಿ,

ನೀವಾಗಿದ್ದರಿ ಅವುಗಳೆಲ್ಲರ ಸಂಪತ್ತಿನ ಭಂಡಾರ,
ನೀವಾಗಿದ್ದರಿ ಅವುಗಳೆಲ್ಲರ ಸುಖ, ದುಃಖಗಳ ಆಲಿಸಿದ ಕಿವಿ.॥
ನೀವೊಬ್ಬ ನೆಚ್ಚು-ಮೆಚ್ಚಿನ ನಾಯಕ,
ನೀವೇ ಶತ್ರುಗಳ ಸದೆಬಡಿದ ಮಹಾದಂಡನಾಯಕ,
ನೀವೇ ಕಳ್ಳ-ಕಾಕರ, ದುಷ್ಟರ, ಭ್ರಷ್ಟರ ಒದ್ದೋಡಿಸಿದ ಮಹಾವೀರ.॥
ನೀವಾಳಿದ್ದರಿ ರಾಜ್ಯನ ದಿಟ್ಟತನಲಿ
ನೀವಾಳಿದ್ದರಿ ರಾಜ್ಯನ ಗಟ್ಟಿತನಲಿ
ನೀವಾಳಿದ್ದರಿ ರಾಜ್ಯನ ಸಕಲ ಸತ್ಯಲಿ॥
ಶಾಂತಿನ ಕೊಟ್ಟ್ ಪ್ರಜೆಗಳಿಗೆಲ್ಲಾ ದೇವರಾಗಿದ್ದರಿ ನೀವ್,
ಕೊಟ್ಟೊಳರಿ ರೈತ ಕುಳಕೆ ಕೀರ್ತಿ ಗೌರವನ
ಓ ನಮೋ ನಮಃ ಧರ್ಮರಾಯ,
ಓ ನಮೋ ನಮಃ ದೊಡ್ಡ ರಾಯ॥
ಇಂದ್ ಕೊಟ್ಟವೆ ಅರ್ಹರಿಗೆ ನಿಮ್ಮ ಹೆಸ್ರ್‌ಲಿ ಪ್ರಶಸ್ತಿ ವರ್ಷಕ್ಕೊಮ್ಮೆ,
ಅದೇ ನೋಡಿ "ನಾಡಪ್ರಭು ಕೆಂಪೇಗೌಡ ಪ್ರಶಸ್ತಿ"
ಪ್ರಶಸ್ತಿ ವಿಜೇತರಲ್ಲಿ ಒಳೊ ಅನೇಕಾನೇಕ ಮಹಾಸಾಧಕರ್,
ಒಳೊ ಇತರ ಪ್ರಶಸ್ತಿನೂ ಪಡೆದ ಅನೇಕ ಗಣ್ಯರ್,
ಪದ್ಮಭೂಷಣರ್, ಪದ್ಮಶ್ರೀಗಣ್ಯರ್, ಪದ್ಮವಿಭೂಷಣರ್, ಕೇಲ್‌ರತ್ನರ್
ವೀರ ಚಕ್ರ ವಿಜೇತರ್, ಇದರ ಕೊಡುವ ಘನ ಸರಕಾರಕ್ಕೂ,
ಬಿ.ಬಿ.ಎಂ.ಪಿ.ಗೂ ನಾವೆಲ್ಲ ತಲೆಬಾಗಿವೆ॥
ಓ ಕೆಂಪರಾಯರೆ,
ಓ ದೊಡ್ಡರಾಯರೆ,
ಓ ಹಿರಿಯ ನಾಡಪ್ರಭು ಕೆಂಪೆಗೌಡರೆ,
ಮತ್ತೊಮ್ಮೆ ನಿಮಗೆ ನಮ್ಮೆಲ್ಲರ ನಮೋ ನಮಃ॥

✍ಕಾವೇರಿಮನೆ ಡಾ॥ ಕೆ. ಯಂ. ಬೋಜಪ್ಪ,

# ಪುರಾವೆ

ಎಲ್ಲಿಂದ ತರ್ಲಿ ಪುರಾವೆನ ಮಾರಾಯ
ನಿನ್ನ ಮೇಲೆನ ಪ್ರೀತಿ ಹಾಂಗೇ ಉಟ್ಟುತೇಳ್ದಕ್ಕೆ
ಯಾವ ಮಾನಲಿ ಅದರ ಅಳ್ದ್ ಹೇಳಿಕೆ ಆದ್ದೆ
ಗೋಂಚಿದಷ್ಟೂ ಉಕ್ಕುವ ಒರ್ತೆ ಪ್ರೀತಿ
ಅದ್ ಅಂತರ ಗಂಗೆ.
    ಪಾಪದಾ ಹಸ್ ಕೂಸು ಬೆಳ್ದ್ ದೊಡ್ಡದ್ ಆಗಿ
    ಮಂಜ ತಾನ್‌ತೇಳ್ದಕ್ಕೆ ಪುರಾವೆ ಕೇಳ್ರೆ
    ತುಂಡಾದ ಹೊಕ್ಕಳ್ ಬೊಳ್ಳಿ ಸಾಕ್ಷಿ ಹೇಳುದು ಹೇಂಗೆ
    ಬಿಗ್ದ ಬಾಂಧವ್ಯ ಶರ್ತ ಇಲ್ಲದ ಪ್ರೀತಿ
    ಅದ್ ಅಂತರಾತ್ಮಕೇ ಗೊತ್ತು.
ಪ್ರಾಣವಾಯು ಸುಳ್ದಾಡಿ ಜೀವಿಗಳ ಪೊರಿಯಕನ
ಅದೇ ಉಸುರ್‌ಗೆ ಆಧಾರನಾ ತ ಕೇಳ್ರೆ
ಸುಳಿವ ಗಾಳಿಗೆ ಯಾವ ಸಾಕ್ಷಿಕೊಡಿಕೆ ಆದ್ದೆ?
ಗಾಳಿ ಬೀಸದೆ ಸುಮ್ಮನಿದ್ದರೆ ಬೇರೆ ಗೆತಿ ಏನ್
ಅದ್ ಸಾವು ತಾನೆ?
    ಪಾಂಡವರ ಗುಹೆ ಉಟ್ಟು ಊರು ಊರುಗಳ್ಲಿ
    ಸೀತೆ ಬಾಮಿನ ನೀರ್ ಎಳ್ದ್ ಕುಡ್ದೊವು ನಾವು
    ಬನ್ನಿ ಮರದ ಬೇರ್ ಆಳಕ್ಕೆ ಇಳ್ದುಟು
    ಅಶೋಕ ಮರದ ವನ ಬನಬನದ ಕಾಡ್
    ಅದ್ ನಮ್ಮ ನಾಡ್.
ಕಬ್ಬುಲಿ ದೊಣ್ಣೆನ ಮಾತರ ನೋಡುವ ಪೊಡ್‌ಂಬ
ಅದರ್ಲಿರುವ ಸೀಂ ರಸನ ಕಾಂಬಕಾದ್ದೆನಾ?
ದೂರ ಇಡ್‌ವ ಚೂಲಿನ್ನೇ ಪ್ರಮಾಣತೇಳಿ
ರಸರುಚಿ ಸತ್ಯನ ತಿಳಿಯಕಾಗದಿದ್ದರೆ
ಅದ್ ಅವನ ಹೆಡ್ಡ್‌ತನ.
    ಆಗಿದ್ದರೆ ಎದೆ ಬಗ್ದ್ ತೋರ್ಸಕಾಗಿತ್ತ್
    ಹನುಮಂತ ಬುಡ್ಸಿದಾಂಗೆ ಅವನ ಎದೆನ
    ಈ ಮೊಣ್ಣ್‌ಲಿ ಹುಟ್ಟಿ ಬೊದ್ಕ್ ಕಟ್ಟಿಕಂಡವರ
    ಎದೆ ಎದೆಲಿ ರಾಮ ಮನೆ ಮಾಡ್ದರ
    ಒಟ್ಟಿಗೆ ಸೀತೆ ಲಕ್ಷ್ಮಣನ

ಲೀಲಾ ದಾಮೋದರ

# ಬೊಳ್ಪು ತೋರ್ಸು

ವೆಂಕಟೇಶ್ವರ ನಾವೆಲ್ಲರು ಕೈಯ ಮುಗ್‌ದ್ ನಿಂತೊಳ
ಬೊಳ್ಪು ತೋರ್ಸಿ ನಡೆಸೊಕೂಂತ ನಿನ್ನ ಮಡಿಲ ಮಕ್ಕಳ
    ಒಂದೆ ಮನಸ್‌ಲಿ ನಾವೆಲ್ಲರು ನಿನ್ನ ಮುಂದೆ ಬಂದೊಳ
    ತಂದೆ ನೀನೇ ಬಂದು ಹರಸೋಕೂಂತ ನಿನ್ನಡಿಯ ಮಕ್ಕಳ
ಕೂಡಿ ಹಾಕಿದ್ ಬೆರೆತ್ ಎಲ್ಲೊರ್ ನಿನ್ನ ನೆನೆಸುತ ಬೇಡುತ
ತಪ್ಪು ಮಾಡಿರೆ ಕ್ಷಮಿಸೊಕೆಂದ್‌ದ್ ನಿನ್ನ ಕೃಪೆಯ ತೋರುತ
    ಎತ್ತಿ ಹಿಡ್‌ದೊಳ ದಿಟ್ಟ ಕಾರ್ಯನ ವಿಘ್ನ ಕೊಡದೆನೆ ರಕ್ಷಿಸ್
    ಕಾಯೊಕಪ್ಪನೆ ಕುಲದ ದೇವನೆ ಅಳ್ದ್ ಹೋಗದೆ ಇರೊಕುತ
ಇಂದು ಮುಂದೆನ್ ಮತ್ತೆ ಎಂದಿಗ್ ನಿನ್ನ ಅನುಗ್ರಹ ಬೇಕುತ
ತಲೆಯ ತಗ್ಸುವೆ ಕೈಯ ಮುಗ್‌ದವೆ ನಮ್ಮ ಹರಸೀತ ಬೇಡುತ
    ಅರೆಭಾಷೆ ಸಂಸ್ಕೃತಿ ಸಾಹಿತ್ಯನ ಬೆಳೆಸಲು
    ಅನುಗ್ರಹಿಸಿ ಹೊಡೆದೋಡಿಸಿ ದಾರಿಲಿರುವ ಕತ್ತಲು.
ವೆಂಕಟೇಶನೆ ನಾವೆಲ್ಲರು ಕೈಯ ಮುಗ್‌ದ್ ನಿಂತೊಳ
ಬೊಳ್ಪು ತೋರಿಸಿ ನಡೆಸೊಕೂಂತ ನಿನ್ನ ಮಡಿಲ ಮಕ್ಕಳ

✍ರವಿ, ಮುಂಗ್ಲಿಮನೆ

# ಶ್ರಮ ಜೀವಿ ಗೌಡ್ರು

ಶ್ರೀ ವೆಂಕಟೇಶಾ ಕುಲದೈವವೇ
ಶ್ರೀ ಶಾರದಾಂಬಾ ಗುರುಪೀಠವೇ
    ಈ ಮಣ್ಣ ಕಣ ಕಣಲಿ ಒಂದಾದ ನಾವ್
    ಬೆರೆಸಿದೊ ಉಸಿರಲ್ಲಿ ಜೀವನದ ಬೇನೆ
    ಅರಸಿದೆವು ಅನವರತ ಕಾಯಕದ ಸುಖವಾ
    ಕೊಟ್ಟೊಳೊ ಜೀವನಕೆ ಸೊಂಪಾದ ಬೆಳೆನಾ
ಧೀಮಂತ ಸಮುದಾಯ ಒಕ್ಕಲಿಗ ಗೌಡ
ಶೌರ್ಯದ ಸಾಹಸದ ಧರ್ಮ ನಿಷ್ಠ ಗೌಡ
ಬರಡನ್ನು ಚಿಗುರಿಸಿದ ಶ್ರಮಜೀವಿ ನೀನ್
ಎಲ್ಲರಲಿ ಒಂದಾದ ಕರುಣಾಳು ನೀನ್
    ಶ್ರೀ ವೆಂಕಟೇಶಾ ನಮ್ಮ ಕುಲದೈವವೇ
    ಶ್ರೀ ಶಾರದಾಂಬಾ ಗುರು ಪೀಠವೇ....

✍ಸರೋಜಿನಿ ಗಂಗಯ್ಯ ಎಂ. ಎ.

# ಪ್ರೀತಿತೇಳ್‌ದ್.....

ಪ್ರೀತಿತೇಳ್‌ದ್ ಒಂದು ಮಾಯೆ
ಬಂಧಿಯಾಗ್‌ಬಡ ಅದ್ ಭ್ರಮೆ
ನಂಬಿರೆ ಭ್ರಮೆ ದಿನಾ
ಸೋತರೆ ಬೇನೆ ದಿನಾ
ಬಂದುಬುಟ್ಟುವೆ ಸುಲಭಲಿ
ಕಣ್ಣೆರೆಡ್ ಕೂಡಿದ ನಗ್‌ಲಿ
ತಿಳಿಸಿರೆ ಸಿಕ್ಕಿಕಂಡವೆ
ದಿನಾ ಗಾಣಲಿ
ವಯಸ್ಸು ನೋಡದೆ
ಮನಸ್ಸು ಹೋದೆ.
ಮೆದು ಮಾತು
ಮೆದು ನಗೆ
ದಿನಾ ಸುಖಲಿ
ಕಣ್ಣೆರಡ್ ಕಾಣದೆ
ಕುರುಡಾಗಿದ್ದದೆ.
ಬದ್‌ಕ್ ಎಷ್ಟ್ ಲಾಯ್ಕ ಎನ್ನುತ್ತಿದ್ದದೆ.
ಬರಸಿಡಿಲ್ ಬಡಿಯಕನೇ
ಎಚ್ಚರ ನೀವಲ್ಲಿ
ಬುಟ್ಟು ಹೋದವೆ ನಡುದಾರಿಲಿ
ಸುತ್ತ ಕತ್ತಲೆ ಹರಡಿದ್ದದೆ ಆಗಲ್ಲಿ
ಬೋರ್ಗರೆವ ಪ್ರವಾಹ ಬಂದರೂ
ತಿಳಿಯದ್ ನಿಮಗಲ್ಲಿ
ಕೊಚ್ಚಿ ಹೋದರೆ ಹೋಗಲಿ
ಎನ್ನುತ್ತಿದ್ದರೆ ನೀವಲ್ಲಿ
ಪ್ರೀತಿತೇಳ್‌ದ್ ಒಂದು ಮಾಯೆ
ಬಂಧಿಯಾಗ್‌ಬಡಿ ನೀವದ್‌ರಲಿ.

✍ಸೆಟ್ಟೇಜನ ಗೀತ ಪದ್ಮನಾಭ

# ಗ್ಯಾನ



ಊರ್‌ಲಿತ್ತ್ ಆಲದ ಮರ
ಆಶ್ರಯವಾಗಿತ್ತ್ ಹಕ್ಕಿಗಳಿಗೆ
ಮನೆಲಿತ್ತ್ ಅವ್ವ
ಮಾದರಿಯಾಗಿತ್ತ್ ಪಿಳ್ಳಿಕಳಿಗೆ
    ಬಿಸಿಲ್‌ತೇಳಿರೆ,
    ನೆರಳ್ ಕೊಡ್‌ತಿತ್ತ್ ಮರ
    ಹಸಿವುತೇಳಿರೆ,
    ಕೈತುತ್ತು ಕೊಡ್‌ತಿತ್ತ್ ಅವ್ವ
ಹಕ್ಕಿಗ ಗೂಡ್ ಕಟ್ಟಿದೋ ಮರಲಿ
ಪಿಳ್ಳಿಕ ಬೆಳ್‌ದೊ ಅವ್ವನ ಮಡಿಲ್‌ಲಿ
ಹಕ್ಕಿಗ ಹಾರಾಟ ಕಲ್‌ತೊ ಮರ್ದ ನೆರಳ್‌ಲಿ
ಪಿಳ್ಳಿಕ ಒಳ್ಳ ಸಂಸ್ಕಾರನ ಕಲ್‌ತೊ ಅವ್ವನ ನಡೆತೆಲಿ
    ಹಕ್ಕಿಗಳ ಚಿಲಿಪಿಲಿ,
    ಮರಕೆ ಸಂಗೀತ ಆತ್
    ಪಿಳ್ಳಿಕಳ ತುಂಟಾಟಲಿ,
    ಅವ್ವ ಖುಷಿ ಕಾಂಬತಿತ್ತ್
ಹಕ್ಕಿಗಳ ಆಟ ಹಾರಾಟ
ಮರಕೆ ನಿತ್ಯ ಶೃಂಗಾರ
ಮಕ್ಕಳ ಕೀಟ್ಲೆಗಳಿಗೆ
ಅವ್ವನ ಬುದ್ಧಿ ಮಾತೇ ಜೇಂಕಾರ
    ಮರಲಿ ಹಕ್ಕಿಗ
    ಜೀವನ ಪಡ್‌ದೊ
    ಅವ್ವನಲ್ಲಿ ಪಿಳ್ಳಿಕ
    ಕನಸು ಕಂಡಿದ್ದೊ.
ಬಾತ್ ಬಾರಿ ಬಿರುಗಾಳಿ ಮಳೆ
ಆಲದ ಮರ ಮುರ್‌ದ್ ಬೀತ್
ಹಕ್ಕಿಗ ಮಳೆ ನೀರ್‌ಲಿ ಚೆಂಡಿ ಆದೊ.

ಅವ್ವನ ಆಯುಷ್ಯ ತೀರಿ ಹೋತ್
ಎದೆ ಹಿಡ್‌ಕಂಡ್ ಕುಸ್ದ್ ಬೀತ್
ಪಿಳ್ಳೆಕ ಕಣ್ಣೀರ್‌ಲಿ ಚೆಂಡಿ ಆದೊ.
ಮರ ಸತ್ತರೂ
ಬೇರ್ ಮಣ್ಣ್‌ಲಿ ಉಟ್ಟು
ಅವ್ವ ಹೋದರೂ
ಗ್ಯಾನ ಮನ್‌ಸ್‌ಲಿ ಉಟ್ಟು.

✍ಹುಲಿಮನೆ ಧನ್ಯಶ್ರೀ ಜೀತ್‌ಕುಮಾರ್,

## ಅರೆಗಾಲ

ಬಾತ್ ಈಗ ಮಳೆ ಮರ ಚಿಗ್‌ರ್ತ್
ನೆಲ ತಂಪಾತ್ ಧೂಳು ದೂರಾತ್
ಮನಸ್ಸ್ ಹಗ್‌ರಾತ್ ಹುಲ್ಲು ಹಸ್‌ರಾತ್.
ಹಿಂದೆ ಕಳ್ದ ಗಾಳಿ ಮಳೆನ ಗ್ಯಾನ ಆತ್.
ನಾಟಿ ಮಾಡ್ದು ಬ್ಯಾಡತ ಕೆಲವರ ಚಿಂತೆ
ಹಿಂಗಾಗಿ ಹಡ್ಲ್ ಗದ್ದೆ ಕಾಂಬಕನ ರೈತಂಗೆ ಚಿಂತೆ
ದನೆಗಳಿಗೆ ತಿಂಬಕೆ ಇಲ್ಲದಾತ್ ಈಗ ಹುಲ್ಲು ಕಂತೆ
ಕಾಳ್-ಕಡಿ, ಸೊಪ್ಪು-ತರಕಾರಿಗೆ ಈಗ ಸಂತೆ
ಊರು ಹಬ್ಬಗಳ ಸಾಲ್ ಸಾಗಿ ಬರ್ತಾ ಉಟ್ಟು
ಆಟಗಾರರಿಗೆ ಸಂಭ್ರಮದ ಆಟ
ಸ್ಪರ್ಧೆಗಳ ಈ ಆಟೋಟಗಳಲ್ಲಿ ಬಹುಮಾನ ಉಟ್ಟು
ಅಂತು ಇಂತು ಅರೆಗಾಲ ಕಳಿತಾ ಉಟ್ಟು.

✍ಎಸ್. ಕೆ. ಈಶ್ವರಿ

# ಬಾಣಲಿ ನಡ್ದದೆ ರಣರಂಗ



ಬಾಣಲಿ ನಡ್ದದೆ ರಣರಂಗ
ಮ್ಯೊಂಸನ ಎದೆ ಎಲ್ಲ ನಡ್ಗ್ಯೋದೆ.
ಹೆದ್ರಿದ ಕಣ್ಣುನು ಮುಚ್ಯೋದೆ.
ಬಾಕುಡೆ ಮಿಂಚಿದೆ
ಗುಡ್ಗುನು ಗುಡ್ಗಿದೆ
ಕೇಳುವ ಕೆಬಿಗಾ ಹೊಟ್ಯೋದೆ
ಬಾಣ ತುಂಬೆಲ್ಲಾ ಬಾಕುಡೆ ಬೊಳ್ಪು
ಪಳ ಪಳ ಹೊಳ್ದಾದೆ
ಗುಡ್ಗುನ ಅರ್ಬಟೆ ಜೋರಾದೆ.
ಅಲ್ಲೊಂದು ಗುಡ್ಗು
ಇಲ್ಲೊಂದು ಸಿಡ್ಲ್
ಸೂರ್‌ನೆ ಮ್ಯೆ ಮೇಲೆ ಬಿದ್ದಾಂಗಾದೆ.
ಕತ್ತಿಗೆ ಕತ್ತಿ ತಾಂಗಿಕನಾ
ರಟ್ಟುವ ಕಿಡಿಗಳ ಹಾಂಗೆ
ಕಿಚ್ಚಿನ ಉಂಡೆ ಕಂಡಾಂಗಾದೆ.
ಗುಡ್ಗುನು ಗುಡ್ಗಿದೆ
ಭೂಮಿನು ನಡ್ಗಿದೆ
ಬಾರಿ ಸಿಡ್ಲೊಂದ್ ಬೊಡ್ದಾದೆ
ಗುಡ್ಗ್‌ನ ಸದ್ದ್ ಜೋರಾತ್
ಸಿಡ್ಲೊಂದ್ ದೂರಲಿ ಬಿದ್ದೋತ್
ಜನಂಗಳ ಎದೆನೂ ಹೊಡ್ಕಂಡತ್.
ದೂರಲಿ ಎಲ್ಲೋ ಸಿಡ್ಲ್‌ನ ಹೊಡ್ತ,
ಅದ್ ಹೋಗಿ ಎಲ್ಲಿಗೆ ಬೊಡ್ತಾ?
ಚಾಳೆನ ಕೊಡಿನೂ ಸುಟ್ಟೋತಾ?
ಪಳ ಪಳ ಪಳಾಂತ
ಬಾಕುಡೆ ಹೊಳ್ತ
ಸಿಡ್ಲ್‌ನ ಅಬ್ಬರ ನೀವ್ಗೆಲ್ಲ ಕೇಳ್ತ?
ಅಬ್ಬಬ್ಬ! ಗುಡ್ಗುನ ಗುಡ್ಗಾಟನೇ?
ಸಿಡ್ಲ್‌ನ ಅಬ್ಬರ ದೊಡ್ಡಾಟನೇ?

ಬೆದ್ರಿದ ಮ್ಯೊಂಸರ ಪರ್‌ದಾಟನೇ?
ಬಾಣಲಿ ನಡ್ಡದೆ ರಣರಂಗ
ಬಾಣಲಿ ನಡ್ಡದೆ ರಣರಂಗ

* * * * *

✍ಎಂ. ಜಿ. ಕಾವೇರಮ್ಮ

## ನನ್ನವ್ವ

ಅವ್ವ ಅವ್ವ ನನ್ನವ್ವ
ಕೈಯಾ ತುತ್ತು
ಮರೇಕೇ ಬೊತ್ತು
ಹೇಂಗೇ ಮರೆಯಲಿ? ನಮ್ಮವ್ವ
ಬಾಯಿಗೆ ಇತ್ತ ತುತ್ತು
ಕೆನ್ನೆಗೆ ಕೊಟ್ಟ ಮುತ್ತು
ಸುರಿಮಳೆ ಸವಿಯನು ಹೇಂಗೇ
ಹೇಂಗೇ ಮರಿಯಲಿ ನನ್ನವ್ವ!
ಕಿಣಿ ಕಿಣಿ ಕೈ ಬಳೆ ಸದ್ದು
ಬೆನ್ನಿಗೆ ಪುಟ್ಟ ಗುದ್ದು
ಆ ಸುಖ ಕೆಬಿಗೆ ನೀಡೋ
ಯಾರಲಿ? ಕಾಣುವೆ ನನ್ನವ್ವ!
ಮೂಂಕಲಿ ತುಂಬಿತು ನೆಗಡಿ
ಸೊರಕ್ಕನೆ ನಿನ್ನ ಬಾಯಿಲಿ
ತಿಳಿಯದೇ ನಗುವೆ ಹಗುರಾಗಿ
ಹೇಂಗೇ ಮರೆಯಲಿ? ನನ್ನವ್ವ!
ಅವ್ವನ ಮೋರೆಲಿ ನನ್ನ ಉಚ್ಚೆ
ಬಿದ್ದರೂ ಅವ್ವ ನನ್ನಪ್ಪ
ನೆಗುವ ಪೊರ್ಲು ಯಾರಿಗೆ ಹೇಳ್ದು
ನನ್ನ ದೇವ್ರು ನೀನವ್ವ
ಹೇಂಗೆ ಮರೆಯಲಿ? ನಮ್ಮವ್ವ!

✍ಉಮೇಶ ಬಿಳಿಮಲೆ

ಲೇಖನ

# ಬಡಿಗೆ ಕೊಟ್ಟೊ! ಬಡ್ಸಿಕಂಡೊ!

**ಗಪ್ಪುದ್ ಚಿಂತೆ!**

ಒಂದ್ ಗುಟುಕ್ ಖೊಡೇಸ್ ರಮ್ ದೊಂಡೆಂದ ಕೆಳಗೆ ಇಳ್ದಿದ್ದು! ಕಬಾಬ್ ಪೀಸ್‌ನ ಇನ್ನೂ ಬಾಯಿಗೆ ಹಾಕಣ್ತ್‌ಲ್ಲೆ, ಅಷ್ಟೊತ್ತಿಗೆ ಗಪ್ಪು ಗ್ಯಾನ ಮಾಡ್ಕೆ ಸುರು ಮಾಡ್ದೆ. ಅಲಾ! ನಂಗೆ ಪ್ರಾಯ ಮೂವತ್ತ್ ಆತ್. ನಾನ್ ಅರ್‌ವತ್ತ್ ವರ್ಷ ಮಾತ್ರ ಬದ್ಕಿನೇಂತ ಗೋಣಿಕೊಪ್ಪ ಸಂತೆ ದಿನ ಗಿಣಿ ಸಾಸ್ತ್ರದಂವ ಹೇಳ್ತ್! ಅಂದರೆ ಇನ್ನ್ ಮೂವತ್ತ್ ವರ್ಷ ಭೂಲೋಕಲಿ ಇದ್ದನೆ! ಇಂದಿಗೆ ಮೂವತ್ತೊಂದ್ ವರ್ಷದ ಕೆಳ್ಗೆ ನಾನ್ ಇತ್ಲೆ! ಇನ್ನ್ ಮೂವತ್ತೊಂದು ವರ್ಷ ಆದಮೇಲೆ ನಾನ್ ಇರ್‌ದುಲ್ಲೆ! ಹುಟ್ಟಿಕಿಂತ ಮುಂದೆ ನಾನ್ ಏನಾಗಿದ್ದೆ? ಸತ್ತ ಮೇಲೆ ನಾನ್ ಏನಾನೆ? ಈ ನಾನ್ ಯಾರ್? ದೇವ್ರ್‌ಗಡ, ಪ್ರಪಂಚಗಡ, ಬದ್ಕ್‌ಗಡ!! ಗ್ಯಾನ ಮಾಡಿರೆ ತಲೆ ಬುಡ ಒಂದೂ ಅರ್ಥ ಆದುಲ್ಲೆ!!

**ಪುನರ್ಜನ್ಮ**

ನಾವ್ ಹಿಂದೆದ್ ಜನ್ಮಗಳ್‌ಲಿ, ಮನ್ಸ ಜನ್ಮನೋ, ಪ್ರಾಣಿ ಜನ್ಮನೋ ಆಗಿ ಸತ್ತ್ ಈಗ ಇಲ್ಲಿ ಹುಟ್ಟಿಯೊಳಗಡ! ನಮ್ಗೆ ಕಷ್ಟ ಬಂದರೆ ಅದ್ ಹಿಂದೆದ್ ಜನ್ಮಲಿ ಮಾಡ್ದ ಪಾಪದ ಫಲ, ಸುಕ ಬಂದರೆ ಅದ್ ಹಿಂದೆದ್ ಜನ್ಮಲಿ ಮಾಡ್ದ ಪುಣ್ಯದ ಫಲ. ಹಳೇ ಬಟ್ಟೆನ ಬಿಸಾಕಿ ಹೊಸ ಬಟ್ಟೆನ ಹಾಕಣುವಂಗೆ ಸತ್ತ ಮೇಲೆ ಆತ್ಮ ಈ ಸರೀರನ ಬುಟ್ಟ್ ಬೇರೆ ಸರೀರನ ಸೇರ್ದೆಗಡ. ಒಬ್ಬೊಬ್ಬ ಹೇಳ್ವೆ ಪುನರ್ಜನ್ಮ-ಗಿನರ್ಜನ್ಮ ಎಂತದೂ ಇಲ್ಲೆ. ಮನ್ಸನೋ, ಪ್ರಾಣಿಯೊ ಒಂದ್ ಸಲ ಸತ್ತರೆ ಅದರ ಶರೀರ ಪಂಚ ಭೂತಗಳ ಜೊತೆ ಸೇರಿಹೋದೆ. ಭೂಮಿ, ನೀರ್, ಬೆಂಕಿ, ಗಾಳಿ, ಆಕಾಶಗಳೇ ಆ ಪಂಚ ಭೂತಗ. ಶರೀರಲಿ ಇರ್ವ ಮೂಳೆ, ಮಾಸ ಭೂಮಿಲಿ ಮಣ್ಣ್‌ಗೆ ಸೇರಿ ಮಣ್ಣ್ ಆದೆ. ರಕ್ತ ಮತ್ತೆ ನೀರ್, ನೀರ್ಗೆ ಸೇರಿ ನೀರಾದೆ. ಮೈಲಿದ್ದ ಉಷ್ಣ ಬೆಂಕಿ ಜೊತೆ ಸೇರಿ ಬೆಂಕಿ ಆದೆ. ಸರೀರಲಿ ಇದ್ದ ಉಸುರ್ ಗಾಳಿ ಜೊತೆ ಸೇರಿ ಗಾಳಿ ಆದೆ. ಜುಂವ ಆಕಾಸ ಜೊತೆ ಸೇರಿ ಆಕಾಶ ಆದೆ!!

### ಮಕ್ಕಳೇ ಪುನರ್ಜನ್ಮ

ಒಂದ್ ಮರದ ಬೀಜದೊಳಗೆ ಇಡೀ ಮರ ಸೂಕ್ಷ್ಮ ರೂಪಲಿ ಇದ್ದದೆ. ಮರದ ಬೀಜ ನೆಲಕ್ಕೆ ಬಿದ್ದ್ ಗಿಡ ಆಗಿ ಬೆಳ್ದ್ ಒಂದ್ ಹೊಸ ಮರ ಆದೆ. ಆ ಹಳೇ ಮರ ಒಂದ್ ದಿನ ಕುಂಬಾಗಿ ಬಿದ್ದ್ ಹೋದೆ. ಆ ಹಳೇ ಮರ ಪುಷ್ಟಿಯಾಗಿದ್ದರೆ ಹೊಸ ಮರ ಲಾಯ್ಕಾಗಿ ಬೆಳ್ದದೆ. ಇಲ್ಲದಿದ್ದರೆ ಸರಿಯಾಗಿ ಬೆಳಿಯದೆ ಸೊರ್‌ಗಿಕಂಡ್ ಗಾಳಿ ಬೀಸಿರೆ ಬೀಳುವಂಗೆ ಇದ್ದದೆ. ಹೊಸ ಮರ ಲಾಯ್ಕಾಗಿ, ಇಲ್ಲೆ ಸೊರ್‌ಗಿ ಕಂಡ್ ಇರ್ಕೆ ಆ ಮರದ ಬೀಜದ ಗುಣಮಟ್ಟ ಹೆಂಗೆ ಕಾರಣನೋ, ಹಂಗೆ ಮನ್ಸನ ಕಷ್ಟ ಸುಕಗಳ್ಗೆ ಅವರ ಹೆತ್ತವ್ ಮಾಡ್ದ ಪಾಪ ಪುಣ್ಯಗಳೇ ಕಾರಣ. ಹಳೇ ಮರ ಕುಂಬಾಗಿ ಬಿದ್ದ ಮೇಲೆ ಹೆಂಗೆ ಚಿಗುರುದಿಲ್ಲೆಯೋ ಹಂಗೆ ಮೊನ್ಸನೂ ಸತ್ತ ಮೇಲೆ ಹುಟ್ಟುದುಲ್ಲೆ. ಮಕ್ಕಳೇ ಪುನರ್ಜನ್ಮ!!

### ಸಾಮಾನ್ಯ ನಂಬಿಕೆ

ಮನ್ಸ ಒಳ್ಳೆ ಕೆಲಸ ಮಾಡಿರೆ ಸತ್ತ ಮೇಲೆ ಸ್ವರ್ಗಕ್ಕೆ ಹೋದೆ, ಕೆಟ್ಟ ಕೆಲ್ಸ ಮಾಡಿರೆ ನರಕಕ್ಕೆ ಹೋದೆ. ಮಾಡ್ದ ಪುಣ್ಯ ಪಾಪಕ್ಕೆ ಸರಿಯಾಗಿ ಸ್ವರ್ಗ ನರಕಲಿ ಪಲ ಅನುಭವಿಸಿ ಪುನ ವಾಪಸ್ ಭೂಮಿಲಿ ಮನ್ಸ ಆಗಿ ಹುಟ್ಟಿದೆ! ಮನ್ಸನ ಹತ್ರ ಏನೇನೋ ಆಸೆಗ ಇದ್ದವೆ. ಎಲ್ಲಾ ಆಸೆಗ ತೀರ್ದ ಮೇಲೆ ಹುಟ್ಟ್ ಸಾವ್ ಇಲ್ಲದ ಲೋಕಕ್ಕೆ ಹೋದೆ. ಅಂದರೆ ಮೋಕ್ಷ ಪಡ್ದದೆ.

### ನಾಗರೀಕತೆ ಒಂದ್ ಪಕ್ಷಿನೋಟ

ಓಬೀರಾಯನ ಕಾಲಕ್ಕಿಂತ ಮುಂದೆ ಮನ್ಸ, ಕಾಡ್‌ಲಿ ಬೇಟೆ ಆಡಿಕಂಡ್, ಗೆಂಡೆ, ಗೆಣ್ಸ್‌ತಿಂದ್ಕಂಡ್ ಒಂದ್‌ಕಡೆ ನಿಲ್ಲದೆ ಸುತ್ತಾಡಿಕಂಡ್ ಜೀವನ ಮಾಡ್ತಾ ಇತ್ತ್. ಬುದ್ಧಿ ಬೆಳ್‌ದಂಗೆ ಪ್ರಕೃತಿ ನಿಯಮನ ತಿಳಿಯಕೆ ಸುರುಮಾಡ್ತೆ. ನೆಲದೊಳಗೆಂದ ಬೀಜ ಮೊಳ್ಕೆ ಹೊಡ್ದ್ ಗಿಡ ಆದುನ್ನ ನೋಡಿ ಮಣ್ಣ್‌ಲಿ ಬೀಜ ಬಿತ್ತಿ ಬೆಳೆ ಬೆಳಿಯಕ್‌ತ ತಿಳ್‌ಕಂಡದೆ. ನೀರ್ ಇದ್ದರೆ ಮಾತ್ರ ಮೊಳ್ಕೆ ಹೊಡ್ದ್ ಗಿಡ ಆದೆಂತೇಳುವ ಸಂಗತಿ ಮಳೆನ ನೋಡಿ ತಿಳ್ಕಂಡದೆ. ಕಾಡ್, ಕಲ್ಲ್‌ದ್ ದೊಡ್ಡ ಮಾಳಿ, ಮರದ್ ಪೊಟರೆ ಒಳಗೆ ವಾಸ ಮಾಡ್ತಾ ಇದ್ದಂವ ನೀರ್ ಹುಡಿಕಿಕಂಡ್ ಹೊಳೆ ಕರೆಗೆ ಬಂದದೆ. ಮರದ ನಾರ್, ಸೊಪ್ಪುಂದ ಮೈಮುಚ್ಚಿಕಂಡದೆ, ಮಳೆ ಗಾಳಿ ಬರದಂಗೆ ಮರದ ಕೊಂಬೆ ಎಲೆಗಳ್‌ಂದ ಅಟ್ಟಪಾಳಿ ಕಟ್ಟಿಕಂಡದೆ. ನೆಲನ ಅಗ್ದ್ ಆರಂಭ ಮಾಡಿಕೆ ಸುರು ಮಾಡ್ತೆ. ಆ

ಕಾಲಲಿ ಸಲ್ಪ ಜನ ಕೆಲ್ಸ ಮಾಡಿ ಬೆಳೆ ಬೆಳ್ದ್ ಹೊಟ್ಟೆ ತುಂಬಿಸಿಕಂಡರೆ ಇನ್ನ್ ಸಲ್ಪ ಜನ ಅವ ಬೆಳ್ದ ಬೆಳೆನ ಕಿತ್ಕಂಡ್ ಹೊಟ್ಟೆ ತುಂಬಿಸಿಕಂಡವೆ. ಈ ಕಿತ್ತ್ಕಂಡ್ ತಿನ್ನುವವರ ಉಪದ್ರ ಮಿತಿಮೀರಿಕನ ಕಷ್ಟ ಪಡುವ ಜನಗ ಎಲ್ಲಾ ಸೇರಿ ಅವರ ಪೈಕಿ ಗಟ್ಟಿಮುಟ್ಟು ಇರುವ ಒಬ್ಬ ನಂಬಿಕಸ್ತನ ಕೈಗೆ ಬಡಿಗೆ ಕೊಟ್ಟ್ ಪಾರಕ್ಕೆ ಮಡ್‌ಕಂಡವೆ. ಅಂವನ ಜೀವನಕೆ ಬೇಕಾದ ಏರ್ಪಾಡ್‌ನ ಮಾಡಿಕೊಟ್ಟವೆ. ಹಂಗೆ ಮನ್ಸನ ನಾಗರೀಕತೆಯ ಬದ್ಕ್ ಸುರು ಆದೆ.

### ಪುರುಷಾರ್ಥ ಸಾಧನೆ

ಹೊಟ್ಟೆ ತುಂಬಾ ಉಂಬಕಿರುವ ವ್ಯವಸ್ಥೆ ಆತ್. ಕಡ್ಕೆಲಿರುವ ಕಾಳ್‌ಕಡಿನ ಕಾಯಕೆ ಕರಾರ್ ಆತ್. ಇಷ್ಟಕ್ಕೆ ಬದ್ಕ್ ಆತ? ಇನ್ನೇನಾದರ್ ಉಟ್ಟಾಂತ ಶೋದನೆ ಮಾಡಿಕ್ಕೆ ಸುರು ಮಾಡ್ವೆ, ಧರ್ಮ, ಅರ್ಥ, ಕಾಮ, ಮೋಕ್ಷ ಈ ಚತುರ್ವಿದ ಪರುಷಾರ್ಥ ಸಾಧನೆ ಮಾಡ್ದು ಮನ್ಸ ಜೀವನದ ಉದ್ದೇಸಾಂತ ತಿಳ್ಕಂಡವೆ. ಪುರುಷಾರ್ಥನ ಸಾದಿಸಿಕೆ 1) ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಈ ನಾಲ್ಕ್ ತರ ಜೀವನ ಕ್ರಮ, 2) ಭಾಷಾಶಾಸ್ತ್ರ, ಕೌಶಲ್ಯಶಾಸ್ತ್ರ, ನೀತಿಶಾಸ್ತ್ರ, ತತ್ವಶಾಸ್ತ್ರ ಈ ನಾಲ್ಕ್‌ತರದ ವಿದ್ಯೆ, ಹಿಂಗೆ ಪುರುಷಾರ್ಥ ಸಾದ್‌ಸುವ ಬದ್ಕ್‌ನ ರೂಢಿಮಾಡಿಕಂಡೊ. ಬ್ರಹ್ಮಚರ್ಯಲಿ ಭಕ್ತಿಯೋಗನ ಪಾಲಿಸಿಕಂಡ್ ಮಕ್ಕ, ನಾಲ್ಕ್ ತರದ ವಿದ್ಯೆನ ಕಲ್ತ್ ಮುಂದಕ್ಕೆ ಗೃಹಸ್ಥ ಜೀವನಕೆ ಕಾಲಿಡುತಿದ್ದೊ. ಕಲ್ತ ವಿದ್ಯೆನ ಉಪಯೋಗಿಸಿಕಂಡ್ ಕರ್ಮಯೋಗಿ ಆಗಿ ನ್ಯಾಯ ನೀತಿಂದ ಹೊನ್ನು, ಹೆಣ್ಣು, ಮಣ್ಣು ಸಂಪಾದನೆ ಮಾಡಿಕಂಡ್ ಗೃಹಸ್ಥ ಜೀವನ ನಡ್ಸ್‌ತಾ ಇದ್ದೊ. ಸಂಸಾರದ ಜವಾಬ್ದಾರಿ ಮುಗ್ದಂಗೆ ವಾನಪ್ರಸ್ಥ ಜೀವನ ಸುರು ಮಾಡ್ತಾ ಇದ್ದೊ. ವಾನಪ್ರಸ್ಥಲಿ ರಾಜಯೋಗನ ಪಾಲಿಸಿಕಂಡ್ ಅಷ್ಟಾಂಗ ಯೋಗನ ಕಲ್ತ್ ಇಂದ್ರಿಯಗಳಿಗೆ ಮೀರ್ದ ಜ್ಞಾನ ಪಡ್ಕಣ್ತಾ ಇದ್ದೊ. ಅಲ್ಲಿಂದ ಮುಂದೆ ಅವ್ ಸನ್ಯಾಸ ಯೋಗ ಪಾಲಸಿಕಂಡ್, ತಿಳ್ದ ಜ್ಞಾನನ ಸಮಾಜಕ್ಕೆ ಹೇಳಿಕೊಟ್ಟು ಒಂದ್ ಆರೋಗ್ಯಕರ ಸಮಾಜನ ನಿರ್ಮಾಣ ಮಾಡಿ ಚತುರ್ವಿದ ಪುರುಷಾರ್ಥನ ಪೂರೈಸ್ತಾ ಇದ್ದೊ.

### ಅಷ್ಟಾಂಗ ಯೋಗ

ಕಣ್ತರೆಯೊಳಗೆ ಶುದ್ದ ನೀರ್ ಇರ್ಕನ ಅದರ ತಳ ಲಾಯ್ಕಾಗಿ ಕಂಡದೆ. ಅದರೊಳಗೆ ಒಂದ್ ಕಲ್ಲ್ ಚೂರ್ ಹಾಕಿರೆ ಅಲೆಗ ಎದ್ದ್ ತಳ ಕಾಂಬದುಲ್ಲೆ. ಕಣ್ತರೆಲಿ ತಳ ಇರುವಂಗೆ ನಮ್ಮ ಸುತ್ತಮುತ್ತ ದೈವತ್ವವುಟ್ಟು. ಕಣ್ತರೆಲಿ ನೀರ್ ಇರುವಂಗೆ ನಮ್ಗೆ ಮನ್ಸ್ ಉಟ್ಟು. ನಮ್ಮಲ್ಲಿ ಇರುವ ನಾನಾ ತರದ ಚಿಂತೆಗ ಕಲ್ಲ್ ಚೂರ್‌ಗ ಇದ್ದಂಗೆ! ಕಣ್ತರೆದ್ ತಳನ ನಾವು ನಮ್ಮ ಬರಿ ಕಣ್ಣ್‌ಲಿ ನೋಡ್ವಂಗೆ,

ದೈವತ್ವನ ನೋಡಿಕೆ ಮನ್ಸಂಗೆ ಒಳಕಣ್ ಇದ್ದದೆ. ನೀರೊಳಗೆ ಕಲ್ಲ್‌ಚೂರ್ ಹಾಕಿಕನ ಅಲೆಗ ಎದ್ದ್ ಕಣ್ತರೆದ್ ತಳ ಕಾಂಬದುಲ್ಲೆ, ಹಂಗೆ ಮನ್ಸ ಚಿಂತೆ ಮಾಡಿಕನ ಮನ್ಸುಲಿ ಅಲೆಗ ಎದ್ದ್, ದೈವತ್ವ ಕಾಂಬುದುಲ್ಲೆ. ಮನ್ಸನ ಮನ್ಸುಲಿ ಒಂದ್ ಸೆಕೆಂಡ್‌ಗೆ ಹದ್ನಾಕರ್‌ಂದ ನಲ್ವತ್ ಅಲೆಗ ಎದ್ದವೆ. ಅಷ್ಟಾಂಗ ಯೋಗಲಿ ಬರುವ ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ, ಅಭ್ಯಾಸ ಮಾಡಿರೆ ನಮ್ಮ ಚಿಂತೆಗ ಹೋಗಿ ಮನ್ಸುಲಿ ಅಲೆಗ ಏಳುದು ನಿತ್ತವೆ. ಹಂಗೆ ದೈವತ್ವದ್ ದರ್ಶನ ಆದೆ.

**ಬದ್ಕ್ ಅಲ್ಲ–ಸರ್ಕಸ್**

ಕೈಲಿ ಬಡ್ಗೆ ಕೊಟ್ಟ್ ಕಡ್ಕೆನ ಕಾಯಕೆ ನಿಲ್ಸಿದ ಆಳ್, ಕಾಲ ಕಳ್ದಂಗೆ ಅಂವನ ಕೈ ಕೆಳ್ಗೆ ಇನ್ನೂ ಹೆಚ್ ಹೆಚ್ಚ್ ಆಳ್‌ಗಳ್ನ ಮಡ್ಕಂಡ್ ಊರಿಗೇ ಪಾಳೇಗಾರ ಆಗಿ ಆಡಳಿತ ನಡಿಸಿದೆ. ಯಾರ್ ಅಂವನ ಕೈಗೆ ಬಡಿಗೆ ಕೊಟ್ಟ್ ಅಂವನ ಬೆಳಿಸಿದೊ ಅವರ ಕೈಯಿಂದಲೇ ತೆರಿಗೆನ ವಸೂಲು ಮಾಡ್ದೆ. ಈ ಪಾಳೇಗಾರರೇ ಮುಂದಕ್ಕೆ ರಾಜರ್ ಆಗಿ ರಾಜ್ಯಭಾರ ಮಾಡುವೆ. ಈಗ ರಾಜರ ಆಡಳಿತ ಹೋಗಿ ಸರ್ಕಾರದ ವ್ಯವಸ್ಥೆ ಬಾತ್. ಈಗ ಪುರುಷಾರ್ಥ ಪೂರೈಸುವ ಬದ್ಕ್‌ದ್ ದಾರಿನ ಬದ್ಲಿಸಿದ ನಾವು, ಸರ್ಕಾರಿ ಸರ್ಕಸ್ ಕಂಪನಿಲಿ ಆಂಕಾರದ ವೇಷ ಹಾಕಂಡ್ ಹಣ, ಆಸ್ತಿ, ಅಧಿಕಾರ ಸಂಪಾದನೆ ಮಾಡುವ ಸರ್ಕಸ್ ಮಾಡ್ತಾವೊಳೊ.

**ಹೊಳೆನ ಬುಟ್ಟೊ ಪೊಡಕೆ ಬಿದ್ದೊ.**

ಮಳೆಗಾಲಲಿ ಮೀನ್ ಹಿಡಿಯಕೆ ತೋಡ್‌ಗೆ ಕಟ್ಟೆ ಕಟ್ಟುವೆ. ನೀರ್ ಜಾಸ್ತಿ ಬಂದ್ ಕಟ್ಟೆ ಒಡಿಯದಂಗೆ ಬರೀಲಿ ಒಂದ್ ಬಗಲೆ ತೆಗ್ದವೆ. ಬಗಲೆಗಾಗಿ ಹೋದ ನೀರ್‌ನ ಒಂದ್ ಗುಂಡಿಗೆ ಬೀಳುವಂಗೆ ಮಾಡಿ ಗುಂಡಿಲಿ ಒಂದ್ ಪೊಡನ ಮಡ್ಗಿದ್ದವೆ. ಸ್ವಲ್ಪ ಮೀನ್‌ಗ ತೋಡ್‌ಲೆ ಮುಂದೆ ಹೋಗಿ ಕಟ್ಟೆ ಮೇಲೆಂದ ಹಾರಿ ಹೊಳೆ ಸೇರಿಕಂಡವೆ. ಇನ್ನೂ ಸಲ್ಪ ಮೀನ್‌ಗ ಬಗಲೆಗಾಗಿ ಹೋಗಿ ಪೊಡಲಿ ಬಿದ್ದ್ ಮನ್ಸನ ಹೊಟ್ಟೆ ಸೇರುವೆ. ಈ ಪುರುಷಾರ್ಥ ಪೂರೈಸುವ ದಾರಿಲಿ ಹೋಗ್ತಾ ಇದ್ದ ಅಂದ್‌ದ್ ಜನಗ ತೋಡ್‌ಲಿ ಹೋಗಿ ಹೊಳೆ ಸೇರ್ದ ಮೀನ್‌ಗ ಇದ್ದಂಗೆ. ಸರ್ಕಾರಿ ಸರ್ಕಸ್ ಕಂಪೆನಿಲಿ ಸರ್ಕಸ್ ಮಾಡುವ ನಾವು, ಬಗಲೆಲಿ ಹೋಗಿ ಪೊಡಲಿ ಬಿದ್ದ್ ಮನ್ಸನ ಹೊಟ್ಟೆ ಸೇರ್ದ ಮೀನ್‌ಗ ಇದ್ದಂಗೆ. ಮನ್ಸ ಜನ್ಮದ ಉದ್ದೇಸದ ಕಡೆ ಗೋಷ್ಠಿಯೇ ಇಲ್ಲದ ನಮ್ಮ ಆಧುನಿಕ ಬದ್‌ಕಾಟಲಿ, ಗಪ್ಪುಗೆ ಇದೆಲ್ಲಾ ಅರ್ಥ ಆಗದೇ ಇದ್ದರೂ, ಗಪ್ಪುದ್ ಚಿಂತೆಗೆ ಅರ್ಥ ಉಟ್ಟುತಾನೆ?

✍ಹೊಳೆಕರೆ ಚೆಂಗಪ್ಪ

# ಮಕ್ಕಳ ಶಾಲೆ ಮನೆಲಿ! ಅಲ್ಲನಾ?

"ಮಕ್ಕಳ ಸ್ಕೂಲು ಮನೇಲಲ್ವೆ?" ಈ ಮಾತ್ ಕನ್ನಡದ ಶ್ರೇಷ್ಠ ನಾಟಕಕಾರ ಟಿ. ಪಿ. ಕೈಲಾಸಂ ಅವು ಹೇಳ್ದ್. ಮಕ್ಕಳ ಶಾಲೆ ಮನೇಲಿ ಹೇಂಗಾದೆ? ಶಾಲೆ, ಶಾಲೆನೆ ಮನೆ ಮನೇನೆಂತ ನಾವುಗೆ ಪಕ್ಕನೆ ಅನ್ಸಿದೆ. ಆದರೆ ಆ ಬಗ್ಗೆ ಸೆರಿಯಾಗಿ ವಿಚಾರ ಮಾಡ್ರೆ ಕೈಲಾಸಂ ಹೇಳ್ದ ಸತ್ಯ ಉಟ್ಟುಂತ ಗೊತ್ತಾದೆ.

"ಮನೆಯೆ ಮೊದಲ ಪಾಠ ಶಾಲೆ
ಜನನಿ ತಾನೆ ಮೊದಲ ಗುರುವು
ಜನನಿಯಿಂದ ಪಾಠ ಕಲಿತ ಜನರು ಧನ್ಯರು
ಘನತೆಯಿಂದ ಅವರು ಬಾಳ್ವರೆನುತ ನುಡಿವರು"

ಹೀಂಗೆ ಕನ್ನಡದ ಪದ್ಯ ಒಂದರ್‌ಲಿ ಉಟ್ಟು.

"ಮಕ್ಕಳಿಗೆ ತಂದೆ ಬಾಲ್ಯದೊ
ಳಕ್ಕರ ವಿದ್ಯೆಗಳನರಿಪದಿರ್ದೊಡೆ ಕೊಂದಂ।
ಲಕ್ಕ ಧನವಿರಲು ಕೆಡುಗುಂ
ಚಿಕ್ಕಂದಿನಾ ವಿದ್ಯೆ ಪೊರೆಗುಂ ಚೂಡಾ ರತ್ನ"

ಈ ರೀತಿ ಚೂಡಾರತ್ನ ಕವಿ ಹೇಳ್ದೆ.

"ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ" ಇದ್ ಈಗ ಬಾರಿ ಪ್ರಚಾರಲಿರುವ ಮಾತ್.

ಮೇಲೆ ಹೇಳ್ದ ಪದ್ಯಗ, ಹೇಳಿಕೆಗ ಎಲ್ಲಾ ವಿದ್ಯೆ ಕಲೆಕನ ಮನೆನ ಹೆತ್ತವರ ಪಾತ್ರದ ಪ್ರಾಮುಖ್ಯತೆನ ಹೇಳ್ದೆ.

ಅಭಿಮನ್ಯು ಸುಭದ್ರೆನ ಹೊಟ್ಟೆಲಿ ಇರ್‌ಕನೇ ಚಕ್ರವ್ಯೂಹನ ಪ್ರವೇಶಿಸುದ ಹೇಂಗೇಂತ ಶ್ರೀಕೃಷ್ಣಂದ ಕೇಳಿ ತಿಳ್‌ದಿತ್ತ್‌ಂತ ನಾವು ಮಹಾಭಾರತಂದ ತಿಳ್‌ದವೆ. ಇದರ್‌ಂದ ಮಕ್ಕಳ ಕಲಿಕೆ ಯಾವ ಹಂತಲಿ ಸುರು ಆದೇಂತ ಹೇಳ್ದು ಗೊತ್ತಾದೆ.

ತನಿಗೆ ಎಲ್ಲಾ ಕಡೆ ಇರಿಕೆ ಆದುಲ್ಲೆಂತ ದೇವ್ರು ಅವ್ವನ ಸೃಷ್ಟಿಸಿರೆ, ಒಂದೇ ಸಮೆಲಿ ತನಿಗೆ ಎಲ್ಲರ್‌ನೂ ಸಲಹಿಕೆ ಆಕಿಲ್ಲೆಂತ ಅಪ್ಪನ ಸೃಷ್ಟಿಸಿತ್‌ಂತ, ಒಂದು ಮಾತುಟ್ಟು, ನಡೆ-ನುಡಿ, ಆಚಾರ-ವಿಚಾರ, ಭಾಷೆ-ಸಂಸ್ಕೃತಿ ಈ ಎಲ್ಲಾ ಪಾಠಗ ಮಕ್ಕಳಿಗೆ ಅವ್ವನ ಮಡ್ಲ್‌ಂದ ಅಥವಾ ತೊಟಿಗಿಲ್‌ಂದಲೇ ಸುರುಲೇ ಹಾಕಿಕೊಟ್ಟರೆ ಮಕ್ಕಳ ಭಾವೀ ಜೀವನದ ಭವ್ಯ ಕಟ್ಟಡಕ್ಕೆ ಗಟ್ಟಿನ ಅಡಿಪಾಯ ಹಾಕಿ ಕೊಟ್ಟಾಂಗೆ ಆದೆ. ಸಮಾಜ ಶಿಲ್ಪದ ರಚನೆಲಿ ಅವ್ವಂತೇಳುವ ಶಿಲ್ಪಿಯ ಪಾತ್ರ ಬಾರಿ ಮುಖ್ಯದ್ದ್. "ಏಳರ್‌ಲಿ ಕಲಿಯದ್ದ್ ಎಪ್ಪತ್ತರ್‌ಲೂ ಕಲಿಯಕಿಲ್ಲೆ", "ಮೂರು ವರ್ಷಲಿ ಕಲ್‌ತದ್

ನೂರು ವರ್ಷದವರೆಗೆ"ಂತ ಹೇಳುವ ಮಾತುಟ್ಟು.

ಮಕ್ಕಳ ವ್ಯಕ್ತಿತ್ವದ ಇಡೀ ಬೆಳವಣಿಗೆಲಿ ಅವ್ವನ ಮಾತ್ರ ಅಲ್ಲ ಅಪ್ಪನ ಪಾತ್ರನೂ ಅಸ್ಟೇ ಮುಖ್ಯ. ನಿಜವಾಗಿ ಹೇಳುದೂಂತ ಆದರೆ ಇಡಿ ಮನೇನೇ, ಅಜ್ಜ-ಅಜ್ಜಿ, ಅಣ್ಣ-ಅಕ್ಕ ಎಲ್ಲರ ಪ್ರಭಾವವೂ ಮಕ್ಕಳ ಮೇಲೆ ಆದೆ. ಮಕ್ಕಳ ವ್ಯಕ್ತಿತ್ವದ ನಿರ್ಮಾಣಲಿ ಪರಿಸರದ ಪ್ರಭಾವ ತುಂಬಾ ಇದ್ದದೆ.

ಮಕ್ಕಳ ಬೆಳ್ಸುವ ಕ್ರಮ ಅವರ ವಯಸ್ಸಿಗೆ ತಕ್ಕ ಹಾಂಗೆ ಬದ್ಲ್ ಆಕು. ಸಣ್ಣ ಕೂಸುಗಳ ಜೋಗುಳ ಹಾಡಿ ನಿದ್ದೆ ಮಾಡ್ಸುದು, ಹಂಜ ದೊಡ್ಡವು ಆದ ಮೇಲೆ ಹಕ್ಕಲೆ ಮಲ್‌ಗ್‌ಸಿಕಂಡ್ ಕತೆ ಹೇಳಿ ನಿದ್ದೆ ಮಾಡ್ಸುದು. ಹದಿಹರಯಕ್ಕೆ ಬಂದ ಮೇಲೆ ದಿನ ಪತ್ರಿಕೆಗಳ ಓದುವ ಅಬ್ಬೆಸ ಮಾಡ್ಸೊಕು. ಪತ್ರಿಕೆಗಲ್ಲಿ ಬಂದ ಮುಖ್ಯ ವಿಷಯನ ಉಂಬಕನ, ಈಗ ಹೇಂಗೂ ಊಟದ ಮೇಜಿನ ಸುತ್ತ ಎಲ್ಲವು ಕುದ್ದ್ ಉಂಬೋದು ತಾನೆ, ಆಗ ಚರ್ಚೆ ಮಾಡೊಕು. ಇದರ್‌ಂದ ಮಕ್ಕಳಿಗೆ ಲೋಕಜ್ಞಾನ ಬೆಳ್ದದೆ. ಅಲ್ಲದೆ ಮನೆವರೆಲ್ಲರೊಟ್ಟಿಗೆನ ಸಂಪರ್ಕವೂ ಹೆಚ್ಚಾದೆ.

ಮಕ್ಕಳಿಗೆ ಹೇಳುವ ಕತೆಗ ಸ್ಫೂರ್ತಿದಾಯಕ ಆಗಿರೊಕು. ಅಂತಾ ಕತೆಗಳ ದೊಡ್ಡೊವು ಮುಂದೆ ಓದಿ ಅರ್ಥ ಮಾಡಿಕಣಕು. ಮಕ್ಕಳಿಗೆ ಕುತೂಹಲ ಹೆಚ್ಚಿ, ತುಂಬಾ ಪ್ರಶ್ನೆಗಳ ಕೇಳುವೆ. ಅವುಕೆ ಸಮಾಧಾನ ಆಗುವಾಂಗೆ ಉತ್ತರ ಹೇಳಿಕೆ ದೊಡ್ಡವುಕೆ ಗೊತ್ತಿರೊಕು. ಮಕ್ಕಳಿಗೆ ಬರೇ ಪುರಾಣದ ಕತೆಗಳ್ನೆ ಹೇಳೊಕುತಿಲ್ಲೆ. ಆದರ್ಶ ವ್ಯಕ್ತಿಗಳ ಕತೆಗಳ್ನೂ ಹೇಳಕ್. ಸ್ವಾಮಿ ವಿವೇಕಾನಂದ, ಗಾಂಧೀಜಿ, ಲಾಲ್‌ಬಹುದ್ದೂರ್ ಶಾಸ್ತ್ರಿ, ವಿಶ್ವೇಶ್ವರಯ್ಯ ಹೀಂಗೆ ಎಸ್ಟೋ ಜನ ನಮ್ಮ ದೇಶಲಿ ಆದರ್ಶ ವ್ಯಕ್ತಿಗ ಒಳೊ ತಾನೆ? ಅವರ ಜೀವನದ ಕೆಲವು ಆದರ್ಶ ಘಟನೆಗಳ ಹೇಳ್ರೆ ಮಕ್ಕಳ ಮೇಲೆ ತುಂಬಾ ಪರಿಣಾಮ ಬೀರ್ದೆ. ಉದಾಹರಣೆಗೆ ಈ ಕತೆ ನೋಡಿ– ಒಬ್ಬ ಹುಡುಗ ಹತ್ತನೆ ವಯಸ್‌ಲಿ ಯಾರ್‌ದೋ ತೋಟಂದ ಮಾಯಿನ ಹಣ್ಣ್ ಕದಿಯನ ಸಿಕ್ಕಿಬೀತ್. ಅವಂಗೆ ತೋಟದ ಮಾಲಿ ಹೊಡಿಯಕನ "ನಂಗೆ ಅಪ್ಪ ಇಲ್ಲೆ, ಹೊಟ್ಟೆ ಹಸಿಯತ್ತಿತ್ತ್, ಅದಕ್ಕೆ ಕದಿಯಕ್ಕೆ ಬಂದೆ ದಮ್ಮಯ್ಯ ಬುಟ್ಟುಬುಡೀ"ಂತ ಬೇಡಿಕಂಡತ್. ಅವನ ಬುಡುಕನ ಮಾಲಿ "ಅಪ್ಪ ಇಲ್ಲದಂವ ನೀ ಎಲ್ಲಕ್ಕಿಂತ ಗೌರವಂದ ಬದ್‌ಕಿಕೆ ಕಲಿಯೊಕುಂತ ಹೇಳ್ತ್. ಆ ಮಾತ್ ಹೃದನ ಮೇಲೆ ಎಸ್ಟ್ ಪ್ರಭಾವ ಬೀರ್‌ತ್‌ಂತೇಳ್ರೆ ಅಂವನೇ ಮುಂದೆ ಭಾರತದ ಪ್ರಧಾನಮಂತ್ರಿಗಳ್ಲೇ ಅತ್ಯಂತ ಪ್ರಾಮಾಣಿಕಂತ ಹೆಸ್ರ್ ಪಡ್ದ ಲಾಲ್‌ಬಹುದ್ದೂರ್ ಶಾಸ್ತ್ರಿ.

ಮತ್ತೊಂದು ಉದಾಹರಣೆ 1960–61ರ ಸಂದರ್ಭ ಜನರಲ್ ಕಾರ್ಯಪ್ಪನವರ ಮಂಜ ಭಾರತ ಸೈನ್ಯದಲ್ಲಿದ್ದಂವನ ಪಾಕಿಸ್ತಾನ ಸೈನಿಕರ್ ಬಂಧಿಸಿದ್ರೊ, ಆಗ

ಪಾಕಿಸ್ತಾನಲಿ ಅಯುಬ್ ಖಾನ್ ಸೈನ್ಯದ ಉನ್ನತಾಧಿಕಾರಿ ಅವಂಗೆ ಕಾರ್ಯಪ್ಪನವರ ಮೇಲೆ ತುಂಬಾ ಗೌರವ, ಅದಕ್ಕೆ ಕಾರ್ಯಪ್ಪನವುಕೆ ವಿಸಯನ ವಿವರ್‌ಸಿ ಕಾಗದ ಬರ್ದ್‌ "ನಿಮ್ಮ ಮಂಜನ ಲಾಯಿಕ್ ನೋಡಿಕೊಂಡವೆ ನೀವು ಅಪೇಕ್ಷೆ ಪಟ್ಟರೆ ಬುಡುಗಡೆ ಮಾಡಿ ಕಳ್ಸಿಕೊಟ್ಟವೆ"ಂತ ತಿಳಿಸಿತ್‌ಗಡ. ಅದಕ್ಕೆ ಕಾರ್ಯಪ್ಪನವು "ನಿಮ್ಮ ಸದ್ಭಾವನೆಗೆ ಕೃತಜ್ಞತೆಗ, ನೀವು ಒಳ್ಳ ಭಾರತದ ಸೈನಿಕರ ಹೇಂಗೆ ನೋಡಿಕೊಂಡರೆನೊ ಹಾಂಗೆ ನನ್ನ ಮಂಜನೂ ನೋಡಿಕೊಂಡರೆ ಸಾಕ್, ಅವಂಗೆ ಹೆಚ್ಚಿನ ಸೌಲಭ್ಯ ಬೇಡ, ಒಳ್ಳವರ ಬುಡುಗಡೆ ಮಾಡ್‌ಕನೇ ಇವನ್ನೂ ಬುಡುಗಡೆ ಮಾಡಿ. ಭಾರತದ ಎಲ್ಲಾ ಸೈನಿಕರೂ ನನ್ನ ಮಕ್ಕಳ ಹಾಂಗೆ"ಂತ ಜವಾಬು ಬರ್‌ದೊಗಡ.

ಜಾದುಗಾರ ಪ್ರೊ|| ಶಂಕರ್ ಮನೆ ಉಡುಪಿಲಿ ಉಟ್ಟು. ಜಾಗತಿಕ ಮಟ್ಟದ ಮ್ಯಾಜಿಕ ಪ್ರದರ್ಶನ ಸಪ್ತಾಹ ಕಳ್ದ ಮೇಲೆ ಒಂದು ದಿನ ವಯಸ್ಸಾದ ಶಿವರಾಮ ಕಾರಂತರ್ ಶಂಕರ್ ಮನೆಗೆ ಬಂದ್ ಒಂದು ಕವರ್ ಕೊಟ್ಟು ಹೋದಗಡ. ಆಗ ಶಂಕರ್ ಮನೆಲಿ ಇತ್ಲೆ. ಮನೆಗೆ ಬಂದು ಕಾರಂತರ್ ಕೊಟ್ಟ ಕವರ್‌ನ ನೋಡ್ರೆ ಗಿಲಿಗಿಲಿ ಮ್ಯಾಜಿಕ್‌ಗಾಗಿ ಐದು ಸಾವಿರ ರೂಪಾಯಿಗಳ ಚೆಕ್! ಶಂಕರ್ ಕಾರಂತರ ಮನೆಗೆ ಹೋಗಿ ಚೆಕ್ ಬೇಡಂತ ವಾಪಾಸ್ ಕೊಡಿಕೆ ಹೋದರೆ ಕಾರಂತರ್ ಲಕ್ಷಾಂತರ ಖರ್ಚಾದ ಆ ಕಾರ್ಯಕ್ರಮದ ಹಣ ಪೂರಾ ನೀವುಗೆ ಬಂದುಟಾಂತ ಕೇಳ್ದೊಗಡ. ಆಗ ಶಂಕರ್ ಇಲ್ಲೆಂತ ಹೇಳ್ದೊ. ಆಗ ಕಾರಂತರ್ ನಿಮ್ಮ ಒಳ್ಳೆ ಕಾರ್ಯಕ್ರಮಕ್ಕೆ ಕೊಡಕುಂತ ಕೊಟ್ಟದ್, ಹೆಚ್ಚಿ ಕೊಡಿಕೆ ನನ್ನ ಹಕ್ಕಲೆ ಈಗ ಇಲ್ಲೆಂತ ಹೇಳ್ದೊಗಡ. ಶಂಕರ್ ಚೆಕ್ ಕೇಶ್ ಮಾಡ್ಸ್‌ಕನ ಕಾರಂತರ ಖಾತೆಲಿ ಕನಿಷ್ಠ ಖಾತೆಲಿ ಇರೊಕಾದ ದುಡ್ಡು ಮಾತ್ರ ಇದ್ದದ್‌ಂತ ಶಂಕರ್‌ಗೆ ಗೊತ್ತಾತ್‌ಗಡ. ಕಾರಂತರಿಗೆ ತಮ್ಮ ಬರವಣಿಗೆಗಳ್ದಂದ ಬರುವ ದುಡ್ಡೇ ಹೊರ್‌ತು, ಬೇರೆ ಆದಾಯ ಇತ್ಲೆ. ಆದರೂ ಕಷ್ಟಲಿದ್ದ ಯಕ್ಷಗಾನ ಕಲಾವಿದರಿಗೆ, ಸಂಗೀತಗಾರರಿಗೆ, ಬರಹಗಾರರಿಗೆ ಪ್ರತಿ ತಿಂಗ ಪಿಂಚಣಿನಾಂಗೆ ದುಡ್ಡು ಕಳ್‌ಸ್‌ತ್ತಾ ಇದ್ದೊಗಡ. ಆದರೆ ಕಾರಂತರ್ ಯಾರಿಗೂ ಹೇಳ್‌ತಿತ್ಲೆ. "ಬಲ್ದ ಕೈಲಿ ಕೊಟ್ಟದ್ ಎಡ್ದ ಕೈಗೆ ಗೊತ್ತಾಕೆ ಆಗದ್"ಂತ ಹೇಳುವ ಹಾಂಗೆ.

ಹೀಂಗೆ ಪ್ರಾಮಾಣಿಕರಾಗಿ ಬಾಳ್ದವರ, ಉದಾರಿಗಳ ಕತೆಗಳ ಮಕ್ಕಳಿಗೆ ಹೇಳೊಕು. ಇಂತ ಕತೆಗ ಆಸಕ್ತಿನ ಜೊತೆಗೆ ಜ್ಞಾನ, ಅದಕ್ಕಿಂತ ಮುಖ್ಯಾಗಿ ಮಕ್ಕಳ್ಲಿ ಕುತೂಹಲನ ಬೆಳ್ಸಿದೆ.

ಮುಂದೆ ಒಳ್ಳ ಉದ್ಯೋಗ ಸಿಕ್ಕೊಕೂಂತಾದರೆ ಉನ್ನತ ಶ್ರೇಣಿಲೊ, ರ‍್ಯಾಂಕ್‌ಲೊ ಪಾಸಾದರೆ ಸಾಕಾದುಲ್ಲೆ. ಇಂದ್ ಉದ್ಯೋಗಕ್ಕೆ ಬುದ್ಧಿಶಕ್ತಿ, ಜ್ಞಾನ, ವಿಚಾರಶಕ್ತಿ ಎಲ್ಲಾ ಬೇಕಾದೆ. ಇದರ ಯಾವುದರ್‌ನೂ ಹೆಚ್ಚಿನ ಶಾಲೆಗಳ್ಲಿ ಹೇಳಿಕೊಡುದುಲ್ಲೆ. ಅದಕ್ಕೇ ಹೇಳ್ದು ವಿದ್ಯೆ ಕಲ್ಸುದು ಶಾಲೆಯಾದರೆ ಬುದ್ಧಿ ಬೆಳ್ಸುದು ಮನೆ.

ಮಕ್ಕಳ ಉತ್ತಮ ಪ್ರಜೆಗಳಾಗಿ ಮಾಡಿಕೆ ಶಾಲೆ ಮಾತ್ರ ಸಾಲ್ದ್. ಮನೆನೂ ಬೇಕು. ಹಂಗಾಗಿಯೇ ಹೇಳ್ದು ಅವ್ವ ಅಪ್ಪನೇ ಮಕ್ಕಳಿಗೆ ಸುರುನ ಗುರುಗಂತ.

ಕೆಲವು ಜನ ಕೆಲ್ಸಕ್ಕೆ ಸೇರ್‌ದ ಒಂದು ವರ್ಸಲೇ ಅವರ ಸಂಬಳ ಡಬ್ಬಲಾದೆ. ಅದಕ್ಕೆ ಕಾರಣ ಅವರ ಬುದ್ಧಿಶಕ್ತಿ, ಕೆಲಸದ ನೈಪುಣ್ಯ, ಕೌಶಲ ಇಂದ್ ಕೆಲ್ಸಕ್ಕೆ ಸೇರಿಕೆ, ಬಡ್ತಿ ಪಡೆಯಕೆ ಬರೇ ಮಾರ್ಕ್ ಇದ್ದರೆ ಸಾಲದ್. ಕೆಲವು ಸರ್ಜನ್‌ಗ ಆಪರೇಷನ್ ಮಾಡಿ ಹೊಲಿಗೆ ಹಾಕಿರೆ ಅದ್ ಕಾಂಬೊದೇ ಇಲ್ಲೆ. ಅದ್ ನೈಪುಣ್ಯ. ಬಹುರಾಷ್ಟ್ರೀಯ ಕಂಪನಿಗಳ್ಲಿ ಇಂದ್ ಕೆಲ್ಸ ಸಿಕ್ಕುದು ಅವರ ಬುದ್ಧಿಶಕ್ತಿ, ಕೆಲ್ಸದ ನೈಪುಣ್ಯ, ಕುಶಲತೆಗಳ್‌ಂದ. ಹಂಗಾಗಿ ಡಬ್ಬಲ್ ಡಿಗ್ರಿ ಪಡ್ದವರ್‌ಂದನೂ ಡಿಪ್ಲೊಮಾ ಮಾಡ್ದೊವು, ಡಿಗ್ರಿನೂ ಪಾಸಾಗದವು ದೊಡ್ಡ ಹುದ್ದೆಲಿ, ಸಂಬಳಲಿ ಇದ್ದವೆ.

ಇಂತಾ ಬುದ್ಧಿಶಕ್ತಿನ, ಜ್ಞಾನನ, ಕೌಶಲ್ಯನ ಶಾಲೆಲಿ ಕಲ್‌ಸುದುಲ್ಲೆ. ಹೆಚ್ಚ್ ಮಾರ್ಕ್ ಪಡಿವ ಮಕ್ಕಾ ಎಲ್ಲಾ ಬುದ್ಧಿವಂತರಲ್ಲ. ಹತ್ತನೇ ಕ್ಲಾಸ್‌ವರೆಗೆ ಮಕ್ಕ ನೋಟ್ಸ್‌ಗಳ್ನೋ, ಪ್ರಶ್ನೋತ್ತರಗಳ್ನೋ ಬಾಯಿಪಾಟ ಮಾಡಿ, ಪರೀಕ್ಷೇಲಿ ಕಕ್ಕಿರೆ ಮಾರ್ಕ್‌ಸಿಕ್ಕಿದೆ. ಅದಕ್ಕೆ ಬುದ್ಧಿವಂತಿಗೆ ಬೇಕುತಿಲ್ಲೆ. ವಿದ್ಯೆಂತ ಹೇಳ್ರೆ ನಮ್ಮ ಜ್ಞಾನದ ಪರಿಧಿನ ಬೆಳ್ಸುವಂತದ್. ಆದರೆ ಹೆಚ್ಚಿನ ಶಾಲೆಗಳ್ಲಿ ದುರದೃಷ್ಟಂದ ಸಿಲೆಬಸ್‌ಲಿ ಹೇಳ್ದ ಕೆಲವು ಪುಟಗಳ ವಿಸಯನ ತಿಳಿಯೋದೇ ವಿದ್ಯೆಂತ ಪರಿಗಣಿಸಿವೆ. ಇದಕ್ಕೆ ಮುಖ್ಯ ಕಾರಣ ನಾವು ಇಂದಿಗೂ ಬ್ರಿಟಿಷರ್ ಹಾಕಿಕೊಟ್ಟ ಶಿಕ್ಷಣ ಪದ್ಧತಿನ ಅನುಸರ್‌ಸುದು. ಕಲ್ತ ವಿದ್ಯೆಗು ಸೇರುವ ಕೆಲ್ಸಕ್ಕೂ ಸಂಬಂಧ ಇಲ್ಲದ ಈ ವಿದ್ಯೆ ಯಾಕೆ? ಮುಂದೆ ನಾನೇನ್ ಆನೆಂತ ತಿಳಿಯದೆ ಅನಗತ್ಯ ವಿಷಯಗಳ ಓದುದರ್‌ಂದ ಮಕ್ಕಳಿಗೆ ಓದುವ ಆಸಕ್ತಿ ಕಮ್ಮಿ ಆದೆ. ಮಕ್ಕಳಿಗೆ ಆಸಕ್ತಿ ಇರುವ ವಿಷಯನ ಕಲಿಯಕೆ ಅವರ ಪ್ರೋತ್ಸಾಹಿಸೋಕು. ಹೆಚ್ಚಿ ಹೆಚ್ಚಿ ತಿಳ್‌ಕಂಬ ಆಸಕ್ತಿನ ಬೆಳ್‌ಸೊಕು.

ಈಗನ ಕಾಲಲಿ ಮನೆಲಿ ಮಕ್ಕಳಿಗೆ ಒಳ್ಳೆ ವಾತಾವರಣ ಸೃಷ್ಟಿ ಮಾಡುದೇ ದೊಡ್ಡ ಸಮಸ್ಯೆಯಾಗಿ ಕಾಂಬೊದು. ನಗರಗಳ್ಲಂತೂ ಅಪ್ಪ, ಅವ್ವ ಇಬ್ಬರೂ ಕೆಲ್ಸಕ್ಕೆ ಹೊರಗೆ ಹೋಕಾದ ಪರಿಸ್ಥಿತಿ. ಮಕ್ಕಳ ಹಗಲಿಡೀ ನೋಡಿಕೊಂಬೊದು ಕೆಲ್ಸದವ್ವೋ, "ಡೇಕೇರ್"ನವ್ವೋ. ಹಿಂಬೊತು ಬಂದ ಹೆತ್ತವುಕೂ ಸೆರಿಯಾಗಿ ಮಕ್ಕಳೊಟ್ಟಿಗೆ ಕುದ್ದು ಮಾತಾಡಿಕೆ, ಆಡ್ಸಿಕೆ, ಕೊಂಡಾಟ ಮಾಡಿಕೆ ಪುರುಸೊತ್ತು ಇಲ್ಲದ ಸ್ಥಿತಿ. ಅದೇನೆ ಇದ್ದರೂ ಮಕ್ಕಳ ಏಳಿಗೆನೇ ಮುಖ್ಯ ಆಗಿರ್ಕನ, ಕಲಿಕಾ ವಾತಾವರಣನ ಸೃಷ್ಟಿ ಮಾಡ್ದು ಅವ್ವ ಅಪ್ಪನ ಕರ್ತವ್ಯವೇ ಆಗಿದ್ದದೆ. ತಮ್ಮ ಕೆಲವು ಸುಖಗಳ ಮಕ್ಕಳಿಗಾಗಿ ತ್ಯಾಗ ಮಾಡೊಕಾದೆ.

ಹಿಂದೆ ಮಕ್ಕಳಿಗೆ ತೊಟಿಗಲ್‌ಲಿ ಮಲ್‌ಗ್‌ಸಿ ಜೋಗುಳ ಹಾಡಿ ನಿದ್ದೆ ಮಾಡ್‌ಸ್‌ತ್ತಾ ಇದ್ದೊ. ಈಗನ ಅವ್ವಂದರಿಗೆ ಜೋಗುಳ ಗೊತ್ತುಟ್ಟೊ ಇಲ್ಲೆನೊ. ಹಂಜ ಏನಾದರು ಲಾಲಿ ಹಾಡ್ ಗೊತ್ತಿದ್ದರೂ ಹಾಡಿ ಮಲ್‌ಗ್‌ಸೊವು ಕಮ್ಮಿ. ಹಾಂಗೆ ಕತೆ ಹೇಳಿ ನಿದ್ದೆ ಮಾಡ್ಸೊವು ಕಮ್ಮಿ. ಮಕ್ಳ ಒತ್ತಾಯ ಮಾಡ್ರೆ ಕತೆ ಪುಸ್ತಕ ಓದಿ ಹೇಳುವೋ ಅಸ್ಟೆ. ಮನೆಲಿ ಅಜ್ಜ, ಅಜ್ಜಿ ಇದ್ದರೆ ಜೋಗುಳ, ಕತೆ ಹೇಳುವನೊ ಏನೊ. ಈಗ ಮನೆಲಿ ಟಿ.ವಿ., ಕೈಲಿ ಮೊಬೈಲ್‌ಂದ ಮಕ್ಕಳ ಕಡೆ ಲಕ್ಷ್ಯ ಕಮ್ಮಿ ಆದೆ. ಮಕ್ಕಳ ಮೊದ್ದೊಮೊದ್ದಾದ ಪ್ರಶ್ನೆಗಳಿಗೆ ಉತ್ತರ ಕೊಡುವ ವ್ಯವದಾನವೂ ಕೆಲವುಕೆ ಇರುದುಲ್ಲೆ. ಹಿಂದೆ ಮಕ್ಕಳಿಗೆ ಅವ್ವ ಅಪ್ಪನ ಮಾತ್‌ಂತ ಹೇಳ್ರೆ ವೇದವಾಕ್ಯ. ಅಪ್ಪನ ಕಂಡ್ರೆಂತೂ ಹೆದ್ರಿಕೆ. ಹಂಗಾಗಿ ಬೀಡಿ ಸಿಗ್ರೇಟ್ ಎಳೆವ ದುರಬ್ಯಾಸಂದ ದೂರ ಇರ್‌ತಿದ್ದೊ. ದೊಡ್ಡೊವು ಮಾಡ್ದಾಂಗೆ ಮಕ್ಕ ಮಾಡಿಕೆ ಆಗದ್, ದೊಡ್ಡವು ಹೇಳ್ದಾಂಗೆ ಕೇಳೊಕು, ಮಾಡೊಕುಂತ ಹೇಳುವ ನಂಬಿಕೆ ಇತ್. ಈಗ ಹಾಂಗೆ ಅಲ್ಲ ಮಕ್ಕ ಬಾರಿ ಚುರುಕು, ಸುಮ್ಮನೆ ಬಾಯಿ ಮುಚ್ಚಿಕಂಡ್ ಕುದುರೊವು ಅಲ್ಲ. ದೊಡ್ಡವರ ಕೈಲಿರುವ ಮೊಬೈಲ್ ನಂಗೂ ಬೇಕು, ನಾನೂ ನೋಡೋಕು, ಆಟ ಆಡೊಕೂಂತ ಕೇಳ್ವೆ. ಟಿ.ವಿ. ನೀವು ನೋಡ್ರೆ ನಾ ಯಾಕೆ ನೋಡಿಕೆ ಆಗದ್‌ಂತ ಕೇಳುವೆ. ಮನೆಗೆ ನೆಂಟ್ರ್ ಬಾಕನ, ಜೋಸ್ತಿಗ ಸೇರ್‌ಕನ ಗುಂಡು ಪಾರ್ಟಿ ನಡ್ದದೆ. ಮಕ್ಕಳ ಎದ್ರೇ ಕುಡಿಯಕನ ಅವುಕೆ ಫಾಂಟಾ, ಕೋಲಾ, ಹೀಂಗೆ, ಜ್ಯೂಸ್‌ಗಳ ಕೊಟ್ಟ್ ಚೀಯರ್‌ಸ್ ಹೇಳ್ಸುವೆ. ಈ ಅಬ್ಬೆಸಗ ಮುಂದೆ ಉಬ್ಬೆಸ ಆಕಿಲ್ಲೆಂತ ಹೇಂಗೆ ಹೇಳ್ದು?

ನಾವು ಗಮನ್‌ಸಕಾದ ಮುಖ್ಯ ವಿಸಯಾಂತ ಹೇಳ್ರೆ ಮಕ್ಕ ಕೇಳಿ ಕಲಿಯಕ್ಕಿಂತ ಹೆಚ್ಚಾಗಿ ನೋಡಿ ಕಲ್‌ತ್ತವೆ. ಈಗೀಗ ಉಪದೇಸ ಹೆಚ್ಚಿನ ಪ್ರಭಾವ ಬೀರುದುಲ್ಲೆ. ಮಕ್ಕ ಸಣ್ಣದಿರ್‌ಕನ ಅವರ ಮನೆ ಮತ್ತೆ ಸಾಮಾಜಿಕ ಪರಿಸರ ದೊಡ್ಡ ಪರಿಣಾಮ ಉಂಟು ಮಾಡ್ದೆ. ಹದ ಮಾಡ್ದ ಮೊಣ್ಣು ಮುದ್ದೆನಾಂಗಿರುವ ಮಕ್ಕಳ ವ್ಯಕ್ತಿತ್ವನ ಬೇಕಾದ ಆಕಾರಕ್ಕೆ ರೂಪುಸುವ ಕೆಲ್ಸಲಿ ಅವ್ವ ಅಪ್ಪನ ನಡವಳಿಕೆ ತುಂಬಾ ಆದರ್ಶಪ್ರಾಯವಾಗಿ ಇರಕಾದ್ದ್ ಅತೀ ಅಗತ್ಯ. "ಕೂಸು ಸಣ್ಣದ್ ಅದಕ್ಕೇನೂ ಗೊತ್ತಾಕಿಲ್ಲೆ ಬುಡು"ಂತ ತಿಳ್‌ಕಂಡು ಅವ್ವ ಅಪ್ಪ ಜಗಳ ಮಾಡಿಕಂಡ್ ಇದ್ದರೆ, ನಮ್ಮ ದೌರ್ಬಲ್ಯಗಳ ಮಕ್ಕಳ ಮುಂದೆ ಪ್ರದರ್ಶನ ಮಾಡ್ರೆ, ಅಂತಾ ನಡವಳಿಕೆಗಳ ಮಕ್ಕಳ ಕಲಿಕೆ ಹಾಂಗು ವ್ಯಕ್ತಿತ್ವ ನಿರ್ಮಾಣಲಿ ಕೊಡ್ಲಿ ಪೆಟ್ಟಾಗಿಬುಟ್ಟದೆ. ಹಂಗಾಗಿ ಇಂದ್‌ನ ಅವ್ವ ಅಪ್ಪ ಮಕ್ಕಳ ಬೆಳ್ಸಿಕೆ ಎಸ್ಟ್ ಎಚ್ಚರಲಿ ಇದ್ದರೂ ಸಾಲದ್. ಉತ್ತಮ ನಡವಳಿಕೆನ ತಾಳ್ಮೆಂದ, ತಮ್ಮ ನಿರಂತರ ಮಾದರಿಯ ಮೂಲಕ ಮಾತ್ರವೇ ಕಲ್ಸಿಕೆ ಸಾಧ್ಯ.

✍ಪಿ. ಜಿ. ಅಂಬೆಕಲ್

# ಗುರು

ನಮ್ಮ ಸಂಸ್ಕೃತಿಲಿ 'ಗುರು'ಗೆ ಬಾರಿ ದೊಡ್ಡ ಸ್ಥಾನ ಉಟ್ಟು. ಹೆತ್ತ್ ಸಾಕ್‌ವ, ಅವ್ವ-ಅಪ್ಪನಷ್ಟೇ ಅಲ್ಲ, ವಿದ್ಯೆ ಕೊಟ್ಟ ನಮ್ಮನ ಉದ್ಧಾರ ಮಾಡ್‌ವ 'ಗುರು'ಲಿ ದೇವರ್‌ನ ಕಾಂಬಂತ ಉಚ್ಚ ಪರಂಪರೆ ನಮ್ಮದ್.

"ಮಾತೃ ದೇವೋಭವ, ಪಿತೃ ದೇವೋಭವ, ಆಚಾರ್ಯ ದೇವೋಭವ" ಅಂತೇಳಿ ಸಂಸ್ಕೃತಿಲಿ ಹೇಳ್‌ವೆ. ನಮ್ಮ ಬದ್‌ಕ್‌ನ ಶಿಲ್ಪಿಯಾದ ಗುರುನ ಬಗ್ಗೆ ಸರ್ವಜ್ಞ ಹೇಳ್‌ದೆ

"ಮೊಸರ ಕಡೆಯಲು ಬೆಣ್ಣೆ
ಒಸೆದು ತೋರುವ ತೆರದಿ
ಹಸನುಳ್ಳ ಗುರುವಿನುಪದೇಶದಿಂ
ಮುಕ್ತಿ ವಶವಾಗದಿಹುದೆ ಸರ್ವಜ್ಞ!"

ನಾವ್ ಮೊಸರ್‌ನ ಲಾಯ್‌ಕಲಿ ಕಡೆಯಕನ ಹೆಂಗೆ ಬಿಳಿ-ಬಿಳಿ ಬೆಣ್ಣೆ ತೇಲಿಕಂಡ್ ಬಂದದೆನೋ ಹಂಗೇ ಒಬ್ಬ ಒಳ್ಳೆ ಗುರುನ ಉಪದೇಶ ನಮ್ಮನ ಮುಕ್ತಿ ಮಾರ್ಗದತ್ತ ತಕಂಡು ಹೋದೆ. ಅಂತ ಸರ್ವಜ್ಞಂಗೇ ಎಷ್ಟೊಂದು ಭಕ್ತಿ-ಗೌರವ ಗುರೂನ ಕಂಡರೆ!

ಒಂದು ಪಿಜಿನ್‌ನ ಉದಾರಣೆ 'ಗುರು'ನ ಮಹಿಮೆನ ಎತ್ತಿ ಹಿಡ್‌ದದೆ. ಪಿಜಿನ್‌ಗೆ ಅಂಗಳ ದಾಟಿಕೆ ಒಂದ್ ದಿನವಿಡೀ ಬೇಕಾದೆ. ಅದೇ ಪಿಜಿನ್ ಒಂದು ಮನ್‌ಸನ ಬಟ್ಟೆಲಿ ಕುದ್ದರೆ ಒಂದ್ ಗಳಿಗೆಲಿ ಅಂಗಳನ ದಾಟಕ್. ಹಂಗೆನೇ ಒಳ್ಳೆ 'ಗುರು'ನ ದಯೆ, ಅನುಗ್ರಹ ಇದ್ದರೆ ಈ 'ಭವಸಾಗರ'ನ ಸಲೀಸಾಗಿ ದಾಟಕ್.

✍ ಕೊಟ್ಟಕೇರಿಯನ ಲೀಲಾ ದಯಾನಂದ

# ಹಕ್ಕಿಗಳ ವಿವರ



**ಚೆಂಬುಕ :** ಚೆಂಬುಕ ಸಾಧಾರಣ ಎಲ್ಲಾವುಕು ಗೊತ್ತು. ಅದಕೆ ಇನ್ನೊಂದು ಹೇಳುವೆ ಗುಡ್ಡು ಮಾಣಿ, ಗುಡ್ಡುಲಕ್‌ತ ಹೇಳುವೆ. ಯಾರೆ ಆಗಲಿ ಚೆಂಬುಕನ ಮುಖ ನೋಡಿ ಎಲ್ಲಿಗಾದರು ಒಳ್ಳೆಯ ಕಾರ್ಯಕೆ ಹೋದರೆ ನಾವು ಮಾಡುವ ಕೆಲಸ ಎಲ್ಲಾ ಸರಿಯಾದೆ. ನಾವು ಮನೆಲಿ ಇರ್‌ಕನ ಮರದ ತುದಿಯಿಂದ ಗೂಕ್ಕು ಗೂಕ್ಕುತ ಸೌಂಡ್ ಮಾಡ್ದೆ. ಅದು ಸಹ ಒಳ್ಳೆಯದೆ. ಇನ್ನು ನಿಮ್ಮ ಮನೆಯಲ್ಲಿ ಸೌಭಾಗ್ಯ ಬರಲಿಂತ ಹೇಳುವ ಅರ್ಥ. ಕಾಡುಗಳ್ಲಲಿ ಬೇಕಾದಷ್ಟ್ ಹಾವುಗಳ ಮೊಟ್ಟೆ ಇದ್ದದೆಲ್ಲಾ ಚೆಂಬುಕ ಕಾಡ್ ಬಳ್ಳೆಗಳಲ್ಲಿ ಮರಲಿ ಕುದ್ದ್‌ಕಂಡ್ ಇರ್ಕನ ಚೊಯಂತ ದೋಸೆ ಹೊಯ್ದಂಗೆ ಮರ್ರಟದೆ ಅಲ್ಲಿ ಹಾವುಗಳ ಮೊಟ್ಟೆ ಇದ್ದರೆ ಎಲ್ಲಾ ಒಡ್ದ್ ಹೋದೆ.

ಚೆಂಬುಕ ಇಲ್ಲದಿದ್ದರೆ ನಮಿಗೆ ಹಾವುಗಳ್‌ಂದ ಒಡ್ಯಾಡಿಕೆ ಆತ್‌ತ್ತಿಲ್ಲೆ. ಇನ್ನೊಂದು ವಿಷಯ ನಾಟಿ ಕೆಲಸಕ್ಕೆ ಅಗೆ ತೆಗ್ದವೆಲ್ಲಾ ಆಗ ಕಂತೆ ಕಟ್ಟ್‌ಕನ ಚೆಂಬುಕ ಗುಕ್ಕು ಗುಕ್ಕುತ ಸೌಂಡ್ ಮಾಡ್ದೆ. ನಮ್ಮ ಕೈಲಿದ್ದ ಅಗೆ ಕಂತೆನ ಮೂರು ಸಲ ಏರಿ ಮೇಲೆ ಇಡಕು, ಮೂರು ಸಲ ಕೆಳಗೆ ಇಡಕು. ಆ ವರ್ಷ ಬಾರಿ ಲಾಯ್ಕಾಗಿ ಭೂಮಿಲಿ ಬೆಳೆ ಬೆಳ್ದದೆ. ಭತ್ತದ ಲಕ್ಷ್ಮಿ ಮನೆ ತುಂಬಿದೆ. ಸತ್ತವನ ಜೀವ ಮಾಡುವ ಸಂಜೀವನ ಕಡ್ಡಿ ಚೆಂಬುಕನ ಗೂಡಲ್ಲಿ ಇರ್‌ವಂತ ಕಡ್ಡಿ ಯಾರ್‌ಗು ಸಿಕ್ಕುಲ್ಲೆ.

**ಮನೆಹಕ್ಕಿ :**



ಮನೆ ಹಕ್ಕಿ ಎಲ್ಲವರ ಮನೆಲಿ ಗೂಡುಕಟ್ಟಿ ವಾಸ ಮಾಡ್ದುಲೆ. ಅಂತ ಭಾಗ್ಯವಂತರ ಮನೆಲಿ ವಾಸ ಮಾಡ್ದು. ಭತ್ತ ತಿಂದರೆ ಅನ್ನ ತಿಂದರೆ ಅಕ್ಕಿ ತಿಂದರು ನಾವು ಹಕ್ಕಿಗಳ ಬೆರ್‌ಸ್ಸಕೆ ಆಗದ್. ಅವು ದೇವರ ಹಕ್ಕಿ. ಎಂತ ತಿಂದರು ಒಂದಕೆ ಎರಡ್ ಆಗಲಿ ಅಂತ ಹೇಳಿಕಂಡ್ ತಿಂಬುದು ಗಡ. ಆಗ ಮನೆಲಿ ಸಂಪತ್ತು ಸೌಭಾಗ್ಯ ಲಕ್ಷ್ಮಿ ತುಂಬಿದೆ ಗಡ.

ನಂಗೆ ಮಾತ್ರ ಮನೆ ಹಕ್ಕಿನ ತುಂಬಾ ಇಷ್ಟ. ಮನೆ ಕೌವುಕೋಲು ಸಂದ್‌ಲಿ ಗೂಡ್‌ಕಟ್ಟಿ ಮರಿ ಮಾಡಿಕಂಡ್ ಇದ್ದವೆ. ಮನುಷ್ಯ ಮೊಟ್ಟೆ ಮರಿಗಳ ಮುಟ್ಟಿರೆ ಗೂಡ್‌ಂದ ಮರಿಗಳ ಮೊಟ್ಟೆನ ಕೆಳಗೆ ಎಳ್ದ್ ಹಾಕಿದೆ. ಆ ಗೂಡ್ ಬುಟ್ಟ್ ಪುನಃ ಬೇರೆ ಗೂಡ್ ಕಟ್ಟಿದೆ. ನಂಗೆ ಗೊತ್ತು ಹೆಂಗೆ ಅಂದರೆ ನಾವು ಮುಂದೆ ಹಾರಂಗಿಲಿ ಇದ್ದೊ. ಆಗ ನಮ್ಮದ್ ಹುಲ್ಲ್‌ನ ಮನೆ ಆಗಿತ್ತ್. ಬೆದ್ದ್‌ರ್ ಗಳ ಸೆರೆಲಿ ಗೂಡ್ ಕಟ್ಟಿ ಮರಿ ಮಾಡಿತ್ತ್.

ಆಗ ನಮ್ಮ ನೆರೆಮನೆ ಗೂಡೆ ಆ ಹಕ್ಕಿ ಮರಿ ನೋಡಿ ಕೈ ಹಾಕಿ ಮರಿ ತೆಗ್ದ್ ನೋಡ್ತ್. ಪುನಃ ಅಲ್ಲೆ ಇಟ್ಟತ್. ಹಕ್ಕಿ ಬಂದ್ ಏನ್ ಮಾಡ್ತ್ ಗೊತ್ತಾ? ಮೂರು ಮರಿ ಇತ್ತ್. ಗೂಡೆ ಮುಟ್ಟಿದಕೆ ಮರಿಗಳ ಎಲ್ಲಾ ಕೆಳಗೆ ಎಳ್ದ್ ಹಾಕಿತ್. ಅದರ ಮೇಲೆ ಹಕ್ಕಿ ಬೇರೆ ಗಳಲಿ ಗೂಡ್ ಕಟ್ಟಿತ್ತ್. ಆಗ ನಂಗೆ ಗೊತ್ತಾತ್ ಈ ಸಂಗತಿ. ಗೂಡ್ ಕಟ್ಟಿ ಪುನಃ ಮರಿಮಾಡ್ತ್.

**ಭೀಮರಾಜ ಹಕ್ಕಿ**



ಭೀಮರಾಜ ಹಕ್ಕಿ ಕಾಡ್‌ಗಳಲ್ಲಿ ಇರುವ ಎಲ್ಲಾ ಹಕ್ಕಿಗಳಿಗೆ ರಾಜ, ಮೂರು ವರ್ಷ ನೆಲದ ವಳಗೆ ತಪಸು ಮಾಡಿಟು. ಆ ಹಕ್ಕಿ ಕಪ್ಪು ಬಣ್ಣ, ಅದರ ಬಾಲ ಉದ್ದ. ನೆಲದ ವಳಗೆ ತಪಸು ಮಾಡ್‌ಕನ ಉದ್ದದ ಬಾಲ ಮಧ್ಯಕೆ ಗೆದ್ದಲ್ ಹುಳ ತಿಂದ್ ಬಾಲ ಉದ್ದ ವಡ್ಡಂಗೆ ಕಂಡದೆ. ನಾವು ಆ ಹಕ್ಕಿ ಬಾಲ ನೊಡ್‌ಕನ ವಿಚಿತ್ರ ಕಂಡದೆ.

ಭೀಮರಾಜ ಹಕ್ಕಿ ಹದ್ದ್‌ನ ಕಚ್ಚಿ ಮೆಟ್ಟಿ ಬೆರ್‌ಸಿದೆ, ಗಿಡ್‌ಗನ ಕಾಗೆನ ಅದಕ್ಕಿಂತ ದೊಡ್ಡ ಹಕ್ಕಿಗಳೆಲ್ಲ ಕಚ್ಚಿಮೆಟ್ಟಿ ಬೆರ್‌ಸಿದೆ. ಭೀಮರಾಜ ಹಕ್ಕಿ ಈಗ ಮಾತ್ರ ನೋಡಿಕೆ ಸಿಕ್ಕುದಿಲ್ಲೆ. ಅದರ ಸಂತತಿ ಕಮ್ಮಿ ಆಗುಟು.

✍ಕಾಳೆಂಡ ತಂಗಮ್ಮ ಅಪ್ಪಚ್ಚ

# ನಮ್ಮ ಯುವಜನ ಮತ್ತೆ ಧ್ಯೇಯೋದ್ದೇಶಗ

ಪ್ರತಿಯೊಬ್ಬ ವ್ಯಕ್ತಿಗೂ ಅಂವ ಪುರುಷ ಆಗಿರ್ಲಿ ಮಹಿಳೆಯಾಗಿರ್ಲಿ ಬದುಕಲಿ ಒಂದ್ ಧ್ಯೇಯವಿರಕು. ಬದುಕಲಿ ಧ್ಯೇಯ ಅಥವಾ ಉದ್ದೇಶ ಇಲ್ಲದ ವ್ಯಕ್ತಿ ನಿಜಕ್ಕೂ ವ್ಯರ್ಥ. ಧ್ಯೇಯ ಅಥವಾ ಗುರಿಯಿಲ್ಲದ ವ್ಯಕ್ತಿನ ಬದುಕು ಚುಕ್ಕಾಣಿ ಇಲ್ಲದ ಹಡಗ್‌ನಂಗೆ. ಗಾಳಿ ಬಂದ ಕಡೆ ಚಲಿಸುವ ಚುಕ್ಕಾಣಿ ಇಲ್ಲದ ಹಡ್ಗ್ ಎತ್ತಳೊ ಹೋಗುವಂಗೆ ಧ್ಯೇಯ ಇಲ್ಲದ ವ್ಯಕ್ತಿನ ಬಾಳ್ ಸಮಯದ ಕೈ ಗೊಂಬೆಯಾಗಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ತುಯ್ದಾಡ್‌ಕಂಡಿದ್ದದೆ. ಧ್ಯೇಯೋದ್ದೇಶಗ ವ್ಯಕ್ತಿಗೆ ಅದರ್ಲೂ ಇಂದಿನ ಯುವ ಜನಕ್ಕೆ ಅತೀ ಅವಶ್ಯಕವಾಗುಟ್ಟು.

ಯುವ ಜನರ ಮೊದಲ ಧ್ಯೇಯ ಅವು ಜೀವನಲಿ ಸ್ವಾವಲಂಬಿಗಳಾಗಿ ಬದುಕುದಾಗಿರಕು. ಇಂದ್‌ನ ಸಮಾಜದ ಸಾಂಕ್ರಾಮಿಕ ಪಿಡುಗುಗಳಾದ ಧೂಮಪಾನ, ಕುಡಿತ, ರೇಸು, ಕ್ಲಬ್, ಜೂಜು, ಮಾದಕ ದ್ರವ್ಯ ಮುಂತಾದವ್ಕೆ ದಾಸನಾಗದೆ ಸ್ವಚ್ಛ ಬದುಕು ಬಾಳುದೇ ಪ್ರತಿಯೊಬ್ಬನ ಉದ್ದೇಶವಾಗಿರಕು. ತನ್ನ ಹಿರಿಯವ್ಕೆ, ನೆರೆಕರೆಯವ್ಕೆ ಹೊರೆಯಾಗದೆ, ಸಮಾಜ ಕಂಟಕನಾಗದೆ, ಕಿರಿಯವ್ಕೆ ಮಾದರಿಯಾಗಿ ಮಾರ್ಗದರ್ಶಕನಾಗಿ, ಅನುಕರಣೀಯವಾಗಿ ಬದುಕುದೇ ಪರಮ ಧ್ಯೇಯೋದ್ದೇಶವಾಗಿರಕು.

ಕೇವಲ ಧ್ಯೇಯೋದ್ದೇಶಗಳ್ನ ಹೊಂದಿದ್ದರೆ ಸಾಲದ್. ಅದ್ನ ಸಾಧಿಸಿಕೆ ಛಲವಿರಕು. ತನ್ನ ಗುರಿಮುಟ್ಟಿಕೆ ಪ್ರಯತ್ನ ಪಡಕು. ಕೆಲವ್ಕೆ ಅದರ ಫಲಗ ಬೇಗ ಸಿಕ್ಕಿರೆ ಇನ್ನ್ ಕೆಲವ್ಕೆ ನಿಧಾನ ಆದು. ಧ್ಯೇಯೋದ್ದೇಶಗ ವ್ಯಕ್ತಿಂದ ವ್ಯಕ್ತಿಗೆ ಬೇರೆ ಬೇರೆಯಾಗಿದ್ದದೆ. ಕೆಲವ್ಕೆ ಹಣ ಸಂಪಾದನೆ, ಕೆಲವ್ಕೆ ಕೀರ್ತಿ, ಸಮಾಜಸೇವೆ, ವೈದ್ಯ, ವಕೀಲ, ಇಂಜಿನಿಯರ್, ಉಪಾಧ್ಯಾಯ, ನಟ-ನಟಿಯರಾಕುತ ಹಿಂಗೆ ಇನ್ನ್ ಏನೇನೊ ಇರ್ದು. ಆದರೆ ಯುವಜನತೆ ತಮ್ಮ ಧ್ಯೇಯೋದ್ದೇಶಗಳನ್ನ ನಿರ್ಧರಿಸಿಕೆ ಹೆಚ್ಚಿನ ನಿಗಾ ವಹಿಸಕು ಮತ್ತು ಅದ್ ಉತ್ಕೃಷ್ಟವಾಗಿರಕು.

ಯುವಜನಕೆ ಉತ್ತಮ ನಿರ್ಧಾರನ ತಕಣಿಕೆ ಶಕ್ತಿ ಬರಕುತೇಳ್ರೆ ಅವ್ಕೆ ಬಾಲ್ಯಲಿ ಪ್ರಾಥಮಿಕ, ನಂತರ ಪ್ರೌಢಶಿಕ್ಷಣ ಮತ್ತೆ ಕಾಲೇಜ್‌ಲಿ ಒಳ್ಳೆ ಪರಿಸರಲಿ ಶಿಕ್ಷಣ ಸಿಕ್ಕಕು. ಈ ಸಂದರ್ಭಲಿ ಅವರ ಭವಿಷ್ಯ ರೂಪುಗೊಂಡದೆ. ಕಾಲೇಜು ಶಿಕ್ಷಣದ ಹಂತ ಅವರ ಜೀವನನ ರೂಪಿಸಿಕೆ ನಿರ್ಧಾರ ತಕಂಬಂತ ಕಾಲ. ಅಲ್ಲಿವರೆಗೆ ಅಪ್ಪ-ಅಮ್ಮ ಪೋಷಕರ ಪರಾವಲಂಬಿಗಳಾಗಿ ಅವರ ಆಶ್ರಯಲಿ ಒಳ್ಳದು-ಕೆಟ್ಟದ್‌ನ ಗ್ಯಾನ ಮಾಡ್ವ ಗೋಜಿಗೆ ಹೋಗದೆ ಸ್ವಚ್ಛಂದವಾಗಿ ಬೆಳ್ದವೆ.

ತಮ್ಮ ವಿದ್ಯಾಭ್ಯಾಸ ಮುಗ್ದ ಮೇಲೆ ಜೀವನೋಪಾಯಕ್ಕಾಗಿ ಯಾವುದಾದರೊಂದ್ ಮಾರ್ಗನ ಅನುಸರ್ಸಬೇಕಾದೆ. ಜೀವನೋಪಾಯಕ್ಕೆ ಕೇವಲ ಸರ್ಕಾರಿ ಚಾಕರಿನ ಅವಲಂಬಿಸಕಾದ್. ಸರ್ಕಾರ ಎಲ್ಲವ್ಕೂ ಕೆಲ್ಸ ಕೊಡಿಕೆ ಸಾಧ್ಯ ಇಲ್ಲೆ. ಮನ್ಸಿದ್ದರೆ ಮಾರ್ಗತೇಳ್ವಂಗೆ ಜೀವನಲಿ ಸಾಧಿಸಕುತೇಳ್ವ ಛಲ ಇದ್ದರೆ, ದುಡ್ಡ್ ಸಂಪಾದಿಸಕುತೇಳ್ವ ಕಿಚ್ಚಿದ್ದರೆ, ದಾರಿಗ ತುಂಬಾ ಇದ್ದವೆ. ಸ್ವಂತ ಉದ್ಯೋಗ ಮಾಡವ್ಕೆ ಸರ್ಕಾರ ಮತ್ತೆ ಬ್ಯಾಂಕ್‌ಗ ಹಲವು ಯೋಜನೆಗಳ್ನ ರೂಪಿಸಿವಳೊ. ಇದರ ಸದುಪಯೋಗ ಮಾಡಿಕಂಡ್ ಸ್ವಾವಲಂಬಿಗಳಾಗಿ ಬದ್ಕಿಕೆ ಹತ್ತ್ ಹಲವು ದಾರಿಗ ವಳೊ.

ಹೈನುಗಾರಿಕೆ, ಕೋಳಿ ಸಾಕಾಣಿಕೆ, ಅಳುಂಬು ಬೇಸಾಯ ಹಿಂಗೆ ಕೃಷಿಲಿ ಆಸಕ್ತಿ ಇದ್ದವ್ಕೆ ಯಾವುದಾದರೂ ಸ್ವಯಂ ಉದ್ಯೋಗ ಮಾಡಕ್. ಇಲ್ಲರೆ ಯುವಜನ ತಮ್ಮ ವಿದ್ಯಾಭ್ಯಾಸ ಮುಗ್ದ ಮೇಲೆ ತಾವು ಕಲ್ತ ವಿದ್ಯೆಗೆ ತಕ್ಕಂಗೆ ತಮ್ಮ ಜೀವನೋಪಾಯ ಕಂಡ್‌ಕಣಕ್. ವೃತ್ತಿಶಿಕ್ಷಣ ಪಡ್ದ್‌ಕಂಡಿದ್ದಲ್ಲಿ ಸಣ್ಣ ಸಣ್ಣ ಉದ್ಯಮಗಳಲ್ಲಿ ತೊಡ್ಗಿಸಿಕಣಕ್. ವರ್ಕ್‌ಶಾಪ್, ಸರ್ವಿಸ್ ಸ್ಟೇಷನ್, ಕಂಪ್ಯೂಟರ್ ಟ್ರೈನಿಂಗ್ ಸೆಂಟರ್ ಹಿಂಗೆ ಯಾವುದಾದರ್ ತೆರಿಯಕ್.

ಇವೆಲ್ಲಕ್ಕೂ ಮೂಲ ಮಾರ್ಗದರ್ಶಕರ್ ನಮ್ಮ ಹಿರಿಯವು. ಅನುಭವವೇ ದೇವರು. ವಿದ್ಯೆಗೂ ಅನುಭವಕ್ಕೂ ತುಂಬ ವ್ಯತ್ಯಾಸ ಉಟ್ಟು. ಬರೀ ವಿದ್ಯೆ ಕಲ್ತರೆ ಸಾಲ್ದ್. ಎಷ್ಟೇ ವಿದ್ಯೆ ಕಲ್ತರೂ ಅನುಭವ ಇಲ್ಲದಿದ್ದರೆ ಫಲ ಇಲ್ಲೆ. ಎಷ್ಟೊ ಜನ ಅವಿದ್ಯಾವಂತರ್ ಸನ ತಮ್ಮ ಅನುಭವದ ಹಿರಿಮೆಂದ ಉತ್ತಮ ಜೀವನ ಸಾಗಿಸ್ತಾವಳೊ.

ಎಲ್ಲಕ್ಕೂ ಮಿಗಿಲಾಗಿ ಯುವ ಜನಗ ಸಮಾಜಕ್ಕೆ ಹೊಂದಿಕಂಡ್ ಬಾಳುದು ಅನಿವಾರ್ಯ. ಒಬ್ಬ ವ್ಯಕ್ತಿ ಸಮಾಜಂದ ಬೇರೆಯಾಗಿ ಏಕಾಂಗಿಯಾಗಿ ಬದ್ಕಿಕೆ ಸಾಧ್ಯ ಇಲ್ಲೆ. ಮಾನವ ಸಂಘ ಜೀವಿ. ಪ್ರತಿಯೊಬ್ಬರಿಗೂ ತಮ್ಮ ನೈತಿಕತೆನ ಬಗ್ಗೆ ಗೊತ್ತಿರಕು. ಯುವಜನರ ನೈತಿಕಮಟ್ಟ ಉತ್ತಮವಾಗಿರಕು. ನೈತಿಕತೆನ ಪಾಠ ಮನೆಂದನೇ ಶುರುವಾಕು. ಮಕ್ಕಳಿಗೆ ಎಲ್ಲಾ ಕಷ್ಟ–ಸುಖಗ ತಿಳಿಯುವಂಗೆ ಬೆಳ್ಸಕು. ಅವ್ಕೆ ಏನೇ ಕಷ್ಟ ಬಂದರೂ ಎದುರ್ಸಿ ಬದ್ಕಿಕೆ ತಯಾರಿರಕು. ಕೆಟ್ಟ ಚಟಗಳಿಗೆ ಬಲಿಯಾಗದಂತೆ ಎಚ್ಚರ ವಹಿಸಕು. ಇಂದ್‌ನ ದಿನಲಿ ಮೊಬೈಲ್ ಅನಿವಾರ್ಯ ಆಗುಟ್ಟು. ಆದರೆ ಅದರ ಉಪಯೋಗಲಿ ಮಿತಿ ಇರಕು. ಅತಿಯಾದರೆ ಅಮೃತ ಸ ವಿಷ ಆದೆ. ಇತಿಮಿತಿಲಿ ಒಳ್ಳೆ ರೀತಿಲಿ ಬಳ್ಸಿರೆ ಉತ್ತಮ. ಇಲ್ಲರೆ ಅದ್ಕೆ ಜಾಗೃತಿ ಮೂಡ್ಸುವ ಕೆಲ್ಸ ಮಾಡಿಕಾದು.

ನಾವ್ ಮನೆಲಿ ಹೆಣ್ಣ್ ಮಕ್ಕಳಿಗೆ ಮಾತ್ರ ನೀತಿ ಪಾಠ ಹೇಳಿಕಂಡ್ ಕಟ್ಟು ಪಾಡ್‌ಗಳ್ನ ಹಾಕಿ ಹದ್ದ್‌ಬಸ್ತ್‌ಲಿ ಇಸಿಕೆ ನೋಡಿವೆ. ಆದರೆ ಗಂಡ್ ಮಕ್ಕಳಿಗೂ ಅದೇ ರೀತಿ ಕಟ್ಟ್‌ಪಾಡ್ ಹಾಕಿರೆ ಒಳ್ಳೆದುತ ನನ್ನ ಅಭಿಪ್ರಾಯ. ಯಾಕೆತೇಳ್ರೆ ಎರ್ಡ್ ಕೈ ಸೇರಿರೆ ಚಪ್ಪಾಳೆ ಆದು ಅಲಾ. ನೈತಿಕತೆತೇಳ್ದು ಗಂಡ್-ಹೆಣ್ಣ್ ಇಬ್ಬರೂ ಇರಕಾದ್ ಅಗತ್ಯ. ಹಂಗೆತೇಳಿ ಸುಮ್ಮನೆ ದಂಡಿಸದೆ ನಯವಾಗಿ ಉದಾಹರಣೆಗಳ್ನ ಕೊಟ್ಟ್ ಯುವ ಜನತೆನ ಮನಪರಿವರ್ತನೆ ಮಾಡಕು. ಹಂಗೆ ಮಾಡ್ದದ್ರಂದ ಸಮಾಜಲಿ ನಡಿತಿರ್ವ ಎಷ್ಟೊ ಅನಾಚಾರ ಅತ್ಯಾಚಾರಗಳ್ನ ತಡಿಯಕ್. ಇದ್ ಮನೆ ಮನೆಲೂ ನಡಿಯಕು.

ಇಂದ್‌ನ ಯುವ ಪೀಳಿಗೆನೇ ಮುಂದಿನ ದೇಶದ ರೂವಾರಿಗ. ಆದ್ರಂದ ಸಾಮಾಜಿಕ ಕಳಕಳಿನ ಒಟ್ಟಿಗೆ ರಾಜಕೀಯದ ಅರಿವು ಸನ ಇರಕಾದೆ. ದೇಶದ ಉಜ್ವಲ ಭವಿಷ್ಯ ನಮ್ಮ ಯುವಜನತೆನ ಕೈಲಿ ಉಟ್ಟು. ದೇಶದ ಆಡಳಿತಲಿ ಎಲ್ಲವ್ಕೂ ನೇರವಾಗಿ ಭಾಗವಹಿಸಿಕೆ ಸಾಧ್ಯ ಇಲ್ಲೆ. ಆದ್ರಂದ ನಾವ್ ಆರ್ಸಿ ಕಳ್ಸುವ ನಮ್ಮ ಪ್ರತಿನಿಧಿಗ ಸರಿ ಇರಕು. ಒಂದ್ ಕುಕ್ಕೆ ತರಕಾರಿಲಿ ಒಂದ್ ಕರ್ಗಿದ ತರಕಾರಿ ಇದ್ದರೆ ಇಡೀ ಕುಕ್ಕೆ ತರಕಾರಿ ಕರ್ಗಿ ಹೋದೆ. ಮಾರ್ಕೆಟಿಂದ ನಾವ್ ತರಕಾರಿ ತಾಕನ ವಳ್ಳ ತರಕಾರಿನ ಆರ್ಸಿ ತರಕು. ಹಂಗೆ ನಾವ್ ಆರ್ಸಿ ಕಳ್ಸುವ ಜನಪ್ರತಿನಿಧಿಗಳ ಕೈಲಿ ದೇಶದ ಅಳಿವು ಉಳಿವು ಇದ್ದದೆ. ಈ ನಿಟ್ಟ್‌ಲಿ ನಮ್ಮ ಯುವ ಜನಗ ಜಾಗೃತ ಆಕು. ಅವ್ಕೆ ನಾವ್ ಪ್ರೋತ್ಸಾಹ ನೀಡಿ ಸನ್ಮಾರ್ಗಲಿ ನಡಿಯಕೆ ನಮ್ಮ ಕಿಂಚಿತ್ ಸಹಕಾರ ಕೊಡೊನೊ.

✍ಕಟ್ರತನ ಲಲಿತಾ ಅಯ್ಯಣ್ಣ

**ಅನುಭವ**

# ನೆನ್‌ಪುನ ಆಳ

ನಾಲ್ಕೈದ್ ದಿನಗಳ್‌ಂದ ತಲೆ ತಗ್ಗ್‌ಸಿ ಕುದ್ದ್‌ಕಂಡ್ ಒಂದೇ ಸಮ ಸೈಜ್‌ಕಲ್ಲ್ ಒಡ್ದ್ ಜಲ್ಲಿ ಒಡ್ದ್, ತುಂಬ್‌ಸ್‌ತಾಯಿದ್ದ ಹೆಣ್ಣೊಬ್ಬಳ್‌ನ ದಿನಾ ನೋಡ್ತಾಯಿದ್ದೆ. ಒಂದೇ ಜಾಗಲಿ ಕುದ್ದ್ ಆಚೆ ಈಚೆ ನೋಡದೆ ತನ್ನ ಮುಟ್ಟಿಂದ ಬಲವಾಗಿ ಕಲ್ಲ್‌ನ ಒಡ್ದ್ ಜಲ್ಲಿ ರಾಶಿ ಮಾಡ್ತಾಯಿದ್ದವಳು ಜಲ್ಲಿನ ಅಳ್‌ತೆ ಪಾತ್ರಕ್ಕೆ ತುಂಬ್‌ಸಿ ಮತ್ತೆ ಮುಟ್ಟಿನ ಎತ್ತ್‌ಕನ ಆ ಕಡೆ ಹೋದ ನನ್ನ ನೋಡಿ ಉಸ್‌ತೇಳಿ ಉಸುರೆಳ್‌ದ್, ಸೊಂಟಕ್ಕೆ ಕೈ ಹಾಕಿ ಎಲೆ ಅಡ್‌ಕೆ ಚೀಲ ಬಿಚ್ಚಿತ್. ಅವ್‌ಳು ನನ್ನ ಗುರುತು ಹಿಡಿವ ದೃಷ್ಟಿಲಿ ನೋಡ್ತ್. ಎಲ್ಲೋ ನೋಡ್ದ ಇವಳ ಮೊಕನ ನೋಡಿ ಮಾತಾಡ್ಸುವ ಪ್ರಯತ್ನಲಿರ್‌ಕನ ನಂಗೆ ತಕ್ಷಣ ಅವ್‌ಳ ಗುರುತು ಸಿಕ್ತ್. ನಮ್ಮ ಊರು ದೇಸ್ಥಾನ ಬಾಮಿ ತೆಗೆಕನ ನಾವಿನ್ನೂ ಪ್ರೈಮರಿ ಶಾಲೆಲಿ ಓದ್ತಾಯಿದ್ದ ಗ್ಯಾನ. ಅವ್‌ಳು ಗುತ್ತಿಗೆದಾರ ವೇಲಾಯುಧನ ಹೆಣ್ಣ್ ಚೆಲುವಮ್ಮ. ಬಹಳ ಶ್ರಮ ಜೀವಿಗ. ಅಂದ್‌ನ ಹಂಗೆ ಇಂದ್ ಕೂಡಾ ಕಷ್ಟಪಟ್ಟ್ ಕೆಲ್‌ಸ ಮಾಡ್ತಾಯಿದ್ದ ಕಲ್ಲ್‌ವೊಡ್ಡರ್. ವೇಲಾಯುದಂಗೆ ಬೀಡಿ ಸೇದುವ ಚಟ. ಚೆಲುವಮ್ಮಂಗೆ ಎಲೆ ಅಡ್‌ಕೆ ತಿಂಬ ಚಟ ಅಂಟಿಕಂಡಿತ್ತ್. ಹಂಗಾಗಿ ಹಲ್ಲ್ ಬಾಯಿ ಕೆಂಪಾಗಿತ್ತ್. ಅದರ್‌ಂದ ನಂಗೆ ಗುರ್ತ್ ಸಿಕ್ತ್.

ನಾನ್ ಮೊದುವೆ ಆಗಿ ಎಷ್ಟೋ ವರ್ಷ ಕಳ್‌ದ ಮ್ಯಾಲೆ ಹೊಸಮನೆ ಕಟ್ಟ್‌ಸಿ ಅದರ ಹತ್ರನೆ ಯಾಲಕ್ಕಿ ಮಿಷನ್ ಗೂಡು ಮಾಡೊಕುತೇಳಿ ಯಾರಿಗೊ ಹೇಳ್‌ದರ್‌ಂದ ಕಲ್ಲ್ ಕೆಲ್‌ಸಕ್ಕೆ ವೊಡ್ಡರ್‌ನ ಕಳ್‌ಸಿದ್ದೊ. ಅವೇ ಯಿವು.

ಚೆಲುವಮ್ಮ ನನ್ನ ಗುರ್‌ತ್ ಹಿಡ್ತ್. ಬಾಯಿಲಿ ತುಂಬಿದ ಎಲೆ ಅಡಿಕೆ ಕೆಂಪು ರಸನ ಪಾರೆಕಲ್ಲ್‌ನ ಮ್ಯಾಲೆ ಪಡಕ್‌ತೇಳಿ ಉಗ್‌ದ್, ಕುಸಿಲಿ ಮಾತಾಡಿಕೆ ಸುರು ಮಾಡ್ತವಳು. ಅವ್‌ಳೇ ಸುರುಮಾಡ್ತ್. ಎಷ್ಟೋ ವರ್ಷದ ಹಿಂದೆನ ಕತೆ. ಅವ್ವಾ ನಾವು ನಿಮ್ಮೂರು ದೇವಸ್ಥಾನಕ್ಕೆ ಬಾಮಿ ತೆಗ್ಸ್‌ಕನ ನೀವು ಗೂಡೆ ಆಗಿದ್ದರಿ. ಈಗ ವಯ್‌ಸಿಗೆ ಸೆರಿಯಾಗಿ ಶರೀರಲಿ ಬದ್‌ಲಾವಣೆ ಆದರೂ ನೀವು ಆಗಕ್ಕಿಂತ ಈಗ ಇನ್ನೂ ಲಾಯ್ಕನೆ ವಳರಿ. ನಿಮ್ಮ ಮಾತ್‌ಕತೆ ಎಲ್ಲಾ ಹಂಗೆವುಟ್ಟು. ನಿಮ್ಮ ಅವ್ವ ಸಹ ತುಂಬಾ ವಳ್ಳ ಹೆಂಗ್‌ಸ್. ಒಮ್ಮೊಮ್ಮೆ ಮೊರಲಿ ಅಕ್ಕಿ ತಂದ್ ಕೊಡ್‌ತಿದ್ದೊ. ಗೈಪ್‌ಗೆ ತರ್ಕಾರಿ ಕೊಡ್‌ತಿದ್ದೊ. ನಾನ್ ನಿಮ್ಮನ್ನೆಲ್ಲಾ ಗ್ಯಾನ ಮಾಡ್‌ತಾಯಿದ್ದನೆ. ನಾವು ಮೂರು ತಿಂಗ ನಿಮ್ಮ ಮನೆ ಅಡ್ಡ ಕ್ವಾಂಬರೆಲಿ ಮೂರ್ ಕಲ್ಲ್ ಮಡ್‌ಗಿ ಒಲೆಹಾಕಿ ಅಡ್‌ಗೆ ಮಾಡ್‌ಕಂಡಿದ್ದೊ. ಬ್ಯಾರೆಕಡೆ

ಆಗಿದ್ದರೆ ಬಾಡಿಗೆ ಅದೂ ಇದೂ ವಸೂಲು ಮಾಡ್ತಾಯಿದ್ದೊ. ನಾವು ಲಾಯ್‌ಕಾಗಿ ಮೂರು ತಿಂಗ ಇದ್ದದರ್‌ನ ಮರೆಕೆ ಆದುಲೆ ಅವ್ವಾ ತೇಳ್‌ಕನ ನಂಗೂ ಕುಸಿ ಆತ್, ಕಣ್ಣ್ ತುಂಬಿಬಾತ್.

ನಾನ್ ಆಗ ನೋಡ್ದ ಚೆಲುವಮ್ಮ ಹಂಗಿಲ್ಲದ ತುಂಬಾ ಬದ್‌ಲಾದಂಗೆ ಕಂಡತ್. ಆಗ ಅವ್‌ಳು ರವಿಕೆ ಹಾಕದೆ ನೀಲಿ ಸೀರೆ ವುಡ್ತಾಯಿದ್ದದ್ ಗ್ಯಾನಾದೆ. ಕೆಮಿಗೆ ಬಿಚ್ಚೋಲೆ ಹಾಕಿದ ದೊಡ್ಡ ತೂತು ಕೆಮಿನವಳಾಗಿತ್ತ್.

ಈಗನ ಚೆಲುವಮ್ಮ ಕೆಮಿಗೆ ಅರ್ಧ ಪವನ್ ಚಿನ್ನದ ಬೆಂಡೋಲೆ, ಕುತ್ತಿಗೆಗೆ ಐದ್ ಪವನ್‌ನ ಹುರಿ ಹಗ್ಗ ಡಿಸೈನ್‌ನ ಚಿನ್ನದ ಚೈನ್ ವುಟ್ಟು, ಹಿಂಗಿದ್ದ ಚೆಲುವಮ್ಮನ ನೋಡಿ ನಂಗೆ ಹಳೆದೆಲ್ಲಾ ಗ್ಯಾನಾಗಿ ಬಾಲ್ಯಕ್ಕೆ ಹೋದಂಗಾತ್.

ನಾ ಕೇಳ್ದೆ – ಅಲ್ಲ ಚೆಲುವಮ್ಮ ನೀನ್ ಇಷ್ಟ್ ವರ್ಷ ದುಡ್‌ದ್ ತುಂಬಾ ಹಣ ಮಡ್‌ಗಿದ್ದಂಗೆ ಕಂಡದೆ, ವಳ್ಳ ಆಸ್ತಿ, ಮನೆ ಮಾಡಿಕಂಡ್ ಇರುವಹಂಗೆ ಕಂಡದೆತೇಳ್‌ಕನ ಅವ್‌ಳ ಉತ್ತರ ಹಿಂಗಿತ್ತ್. ನಂಗೆ ಇವ್‌ಳ ನೋಡಿಕನ ಕಂಪ್ಯೂಟರ್ ಮೊಬೈಲ್‌ಲಿ ಕೆಲ್‌ಸ ಮಾಡ್‌ವ ಹೆಣ್ಣ್ ಮಕ್ಕಳ್‌ನ ಗ್ಯಾನಾತ್. ಅವ್‌ರ್‌ದೆ ಒಂದು ಕತೆ ಇವ್‌ಳ್‌ದೇ ಒಂದು ಕತೆಯಾಗಿತ್ತ್.

ನಂಗೆ ಬರ್ತಾಯಿದ್ದ ಅಲ್ಪ ಸೊಲ್ಪ ತಮಿಳ್‌ಲಿ ಮಾತಾಡ್‌ಕನ ಅವ್‌ಳಿಗೆ ತನ್ನ ಕಷ್ಟ ಸುಕನ ಹಂಚಿಕಂಡ್ ಹೇಳಿಕೊಂಬ ಕಾಲ ಬಂದದಕ್ಕೆ ಕುಸಿಲಿ ಕಷ್ಟಸುಖ ಮಾತಾಡ್ತ್. ಅವರ ಬದ್‌ಕ್‌ನ ಕಾಲ ಹಂಗಿತ್ತ್. ಅದ್‌ಕೆ ಸೆರಿಯಾದ ಜೀವನ ನಡ್‌ಸ್ತಾಯಿದ್ದೊ.

ಅವ್ವಾ ನನ್ನ ಕತೆ ಇನ್ನೂ ಮುಕ್ತ್‌ಲೇ ಕೇಳಿ – ನಾನ್ ನನ್ನ ಮಗಳ್‌ನ ಮೊದುವೆ ಮಾಡ್ದೆ. ಆ ಹೈದ ನಮ್ಮೊಟ್ಟಿಗೆ ಗುತ್ತಿಗೆದಾರ ಆಗಿ ಕೆಲ್‌ಸ ಮಾಡ್ತಾಯಿತ್ತ್. ಮಗಳ್‌ನ ನೋಡಿ ಮೊದುವೆ ಆಗೊ ಆಸೆಲಿ ಮನೆಲಿ ಸೇರಿಕಂಡ್ ಮೊದುವೆ ಆದಮ್ಯಾಲೆ ಮಂಗ್‌ಳೂರಿಗೆ ಅವನ ಮನೆಗೆ ಕರ್‌ಕಂಡ್ ಹೋತು. ಸುರುಲಿ ಬಾರಿ ಕುಸಿಲಿಯಿದ್ದೊ. ಒಟ್ಟಿಗೆ ಕೂಸುನೂ ಆತ್. ಮಗ್‌ಳು ಆಗಾಗ ಅವರ ಸಂಸಾರದ ವಿಷಯ ಹೇಳ್ತಾಯಿತ್ತ್. ನಾವುನೂ ಸುಮ್ಮನಿರ್ ಎಲ್ಲಾ ಸೆರಿಯಾದೆಂತೇಳಿಕಂಡೆ ಬಂದೊ. ಆದರೆ ಒಮ್ಮೆ ಕೂಸುನ ತಂದ್ ನನ್ನ ಹತ್ರ ಬುಟ್ಟ್ ಹೋದವಳು ಇತ್ತ ಬಾತೆಯಿಲ್ಲೆ. ಏನಾತ್‌ಂತೇಳಿ ಇಲ್ಲಿಗೆ ಮುಟ್ಟ ಗೊತ್ತಾತ್‌ಲೆಂತೆ ದುಕ್ಕ್‌ಳ್‌ಸಿ ಮರ್ಟ್‌ದ್‌ಕಂಡ್ ನಂಗೆ ಬೇಜಾರಾತ್.

ಈಗ ಆ ಹೆಣ್ಣ್ ಕೂಸು ಒಂಬತ್ತನೆ ಕ್ಲಾಸ್‌ಲಿ ಇಂಗ್ಲೀಷ್ ಮಿಡಿಯಮ್ ಕಾನ್ವೆಂಟ್ ಶಾಲೆಲಿ ಓದ್ತಾವುಟ್ಟು. ಅಲ್ಲಿ ನೋಡಿ ನನ್ನ ಕರ್‌ಕಂಡ್ ಹೋಕೆ ಬಂದವಳು ಆ ಮೂಲೆ ಕಲ್ಲ್‌ಲಿ ಕುದ್ದ್ ಓದ್ತಾವುಟ್ಟು. ಆ ಹೆಣ್ಣ್ ಕೂಸಿಗೂ ಯಾರೂಯಿಲ್ಲೆ. ಅದರಪ್ಪ ಕೋರ್ಟ್‌ಗು ಎಳ್ತ್. ಕೂಸುನ ಕೊಡ್ತುದಿಲೆತೇಳಿ ನಾನೇ ತಂದ್ ಸಾಕಿದೆ. ವಳ್ಳ ಮಾರ್ಕ್ಸ್ ತೆಗೆತಾವುಟ್ಟು. ಓದಿ ಕೆಲ್‌ಸಕ್ಕೆ ಸೇರೊಕುತೇಳ್ದು ಅವಳ ಆಸೆ. ಮಗಳ ತರ ಆದು ಬ್ಯಾಡಂತೇಳ್ತ್.

ನಾನ್ ಇಷ್ಟ್ ವರ್ಷ ಕಲ್ಲ್ ಒಡ್ದ್ ಕೆಲ್‌ಸ ಮಾಡಿಕಂಡೇ ಐವತ್ತು ಪವುನು ಚಿನ್ನ, ಎರ್‌ಡ್ ಲಕ್ಷ ದುಡ್ಡ್ ಕೊಟ್ಟ್ ಮೊದುವೆನೂ ಮಾಡ್ದೆ. ಆದರೆ ಅದೃಷ್ಟಲಿ ಈ ತರ ಆಗಿ ಸುಕ ಪಡುವ ಭಾಗ್ಯನೂ ಇಲ್ಲದಾತ್. ಈಗ "ಈ ಕೂಸುಗಾಗಿ ನಾನಿನ್ನು ಬದ್‌ಕಿ ದುಡಿತಾವಳೆ ನೋಡಿ ಅವ್ವಾ"ಂತೇಳಿ ಮತ್ತೊಮ್ಮೆ ಹೇಳ್ತ್.

ನನ್ನ ಗಂಡನೂ ಕುಡ್ದ್ ರೋಗಿ ಆಗುಟ್ಟು. ಅಂವ ಸಾಯೊದು ನಂಗೆ ಇಷ್ಟಯಿಲ್ಲೆ. ನಾವೇ ದಿನಾ ಒಂದು ಪ್ಯಾಕೆಟ್ ಕುಡಿಯಕೆ ತಂದ್ ಕೊಡೊಕು. ಆಗ ಸ್ವಲ್ಪ ಮಾತಾಡಿಕೆ ಶಕ್ತಿಯಿದ್ದದೆ ಉಸಿರಾಟನುಯಿದ್ದದೆ. ಎಲ್ಲಾ ಪಡ್‌ಕಂಡ್ ಬಂದದ್‌ತೇಳ್ತಾ ಮತ್ತೊಮ್ಮೆ ಪಾರೆಕಲ್ಲ್‌ಗೆ ಪಡಕ್‌ತೇಳಿ ಕೆಂಪು ರಸನ ಉಗ್ತ್. ಉರಿ ಬಿಸ್‌ಲ್‌ಗೆ ಆ ಬಣ್ಣ ಕಪ್ಪು ಬಣ್ಣಕ್ಕೆ ತಿರ್‌ಗ್‌ತಾಯಿತ್ತ್.

ಈ ಕತೆನ ನಾನ್ ನಮ್ಮ ಸಂಘಕ್ಕೆ ಹೇಳ್ದೆ. ಎಲ್ಲರ ದನಿನು ಒಂದೇ. ಈ ಸಲ ಅಂತರಾಷ್ಟ್ರೀಯ ಮಹಿಳಾ ದಿನಾಚರಣೆಗೆ ಚೆಲುವಮ್ಮನ ಕರ್ದ್ ಗೌರವ ಕೊಡೊನತೇಳ್‌ಕನ ಎಲ್ಲವು ಒಪ್ಪಿಕಂಡೊ. ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ ದಿನ ಕಲ್ಲುವೊಡ್ಡತಿ ಚೆಲುವಮ್ಮಂಗೆ ಹಾರ ಹಾಕಿ ಸನ್ಮಾನ ಮಾಡ್ದೊ.

✍ಬೈತಡ್ಕ ಜಾನಕಿ ಬೆಳ್ಯಪ್ಪ

# ಕಾರ್ತಿಂಗಳ ಹರಿಕೆ

ಅದ್ ಕಾರ್ತಿಂಗಳ ಐತಾರ ದಿನ. ಸಂಜೆ ಗಂಟೆ 3 ಆಗಿರ್ದು. ಜೋರು ಮಳೆ. ಎಲ್ಲೊವು ಮಳೆ ಮಳೆಂತೇಳಿಕಂಡ್ ಹರಿಕೆಗೆ ಬಂದೊ. ಹರಿಕೆ ಇದ್ದದ್ ನಡ್‌ಮನೆಲಿ. ಎಲ್ಲೊವು ಬಂದ್ ಸೇರ್‍ದೊ. ಆದರೆ ಈ ಪೂಜಾರ್ಕೆ ಮಾಡುವ ಪುಟ್ಟ ಬಾಕನ ಚೂರು ಹೊತ್ತುಮೀರ್‍ತ್. ಹೀಂಗೆ ಗದ್ದೆ ಪುಣಿಲಿ ಓಡಿಕಂಡ್ ಬಂದ ಹೈದ ಅಂಗಳಲಿ ಬಂದ್ ಜಾರಿ ಬುಡ್ಕಂತ ಬೀತ್. ಅಲ್ಲೆ ಐಮರಲಿ ಕುದ್ದಿದ್ದ ಚಾಮವ್ವ ಬೊಬ್ಬೊ ಹಾಕಿದೊ. "ಓ ಹೈದಾ... ಬಿದ್ದನಾ ಮಂಜ... ಮೆಲ್ಲ ಬಾಕೆ ಆತ್ಲೆನೆ ನಿಂಗೆ, ಅಂಗಳ ಜಾರಿದೆತ ಗೊತ್ಲೆನ ನಿಂಗೆ..." ಇಲ್ಲೆವ್ವ ಈ ಹಾಳಾದ ಎಕ್ಕ್‌ಡ, ಇದರ ಹಾಕಿರೆ ಜಾರಿ ಜಾರಿ ಹೋದೆಂತ ಹೇಳ್ದ ಹೈದ ಮೆಲ್ಲ ಎದ್ದ್ ಕೈಕಾಲ್ ತೊಳ್ದ್ ಮನೆಗೆ ಹುಕ್ಕಂತ್.

ಅಷ್ಟೊತ್ತಿಗೆ ನಮ್ಮ ಚಾಮೆವ್ವ... "ಇಂದನೆ ಬೋಜು ಬಂದೊವ್ಕೆ ಕುಡಿಯಕೆ ಕಾಫೀಗೀಪಿ ಏನಾರ್ ಕೊಡುನೆತಾ" ಹೇಳ್ದೊ. ಹಂಗೆ ಬೋಜು ಎಲ್ಲೊವ್ಕೆ ಕಾಫಿ ಕೊಟ್ಟತ್. ಎಲ್ಲವು ಕುಡ್ದೊ. ಗಂಟೆ ನಾಕ್ ಆಕಂಡ್ ಬಾತ್. ಮೇಗಡೆ ಮನೆ ಸಣ್ಣಬಾವ ಹೇಳ್ದೊ, "ಅಲ್ಲ, ಬರೊವೆಲ್ಲ ಬಂದೊಲ್ಲ, ಇನ್ನ್ ಕೋಳಿ ಮುರಿಯೊಮತ." ಹಂಗೆ ಪೂಜಾರಿ ಪುಟ್ಟ ಬಂದ್ ಕೋಳಿನ ಹಿಡ್ಕಂತ್, ಆಗ ಚಾಂಪ, "ಇಂದ ಹೈದ, ಕೋಳಿನ ಕಾಲಿಗೆ ನೀರ್ ಹಾಕಿ ತೊಳ್ದ್, ಮೂಡಕ್ಕೆ ಮುಖ ಮಾಡಿ ಹಿರಿಯವರೊಟ್ಟಿಗೆ ಕೇಳಿಕಂಡ್, ಕೋಳಿಮುರಿತ" ಹೇಳ್ದೊ. ಅಂವ ಕೋಳಿನ ಕಾಲಿಗೆ ನೀರ್ ಹಾಕಿ "ಸರ್ವರೊಟ್ಟಿಗೆ ಕೇಳಿ ದೆವ್ವಕೆ ಕೋಳಿ ಮುರ್‍ದನೆ" ತ ಹೇಳಿ ಕೋಳಿನ ತಲೆನ ಹಿಡ್ದ್ ಎಳ್ದ್ ಅಂಗಳಕ್ಕೆ ಬಿಸಾಡ್ತ್. ಕೋಳಿ ಪಟಪಟತ ಒದ್ದಾಡಿಕೆ ಶುರು ಮಾಡ್ತ್.

ನಮ್ಮ ಚಾಂಪಂಗೆ ಕೋಳಿನ ನೋಡಿ ಏನೋ ಆಗಿರೊಕು ಕಂಡದೆ. ಅವು ಕೋಳಿನ ನೋಡಿಕಂಡ್, "ಮಾಯೆನ ಜಾಸ್ತಿ ತೋರ್‍ಸ್‌ಬಡ, ಏನೋ... ಕೊಡ್ದರ್‍ಲಿ ಒಂದು ಚೂರು ಆಚೆ ಈಚೆ ಆಗಿರ್ದು ಆದರೂ ಕೊಟ್ಟೊಳೊ. ಅದರ ಸಂತೋಷಲಿ ಸ್ವೀಕಾರ ಮಾಡೊಕು, ಮುಂದಗೆ ಹೀಂಗೆ ಆಗದಂಗೆ ನೋಡಿಕಂಡವೆ"ಂತ ಹೇಳ್ದೊ. ಅಂತೂ ಕೋಳಿ ಸತ್ತತ್. ಪೂಜಾರಿ ಪುಟ್ಟ ಕೋಳಿಗೆ ನೀರ್ ಹಾಕಿ ಸ್ವಲ್ಪ ಎಳ್ದಂಗೆ ಮಾಡಿ ರಿಪೇರಿ ಮಾಡಿಕೆ ತಕಂಡೋತ್.

ಇನ್ನ್ ದೆವ್ವಕೆ ಇದ್ದ ಅಡ್ಗೆ ಆಗಿ ಬಳ್ಸಿಕೆ ಮುಟ್ಟ ಯಾರಿಗೂ ಏನೂ ಕೆಲ್ಸ ಇಲ್ಲೆಲ್ಲ. ಹಂಗೆ ಎಲ್ಲೊವು ಕುದ್ದ್ ಮಾತಾಡಿಕಂಡ್ ಇರ್ಕನ ಮೇಗಡೆ ಮನೆ ರಾಜ ಹೈದ ಬಾತ್. ಅಂವ ಮೈಸೂರ್‌ಲಿ ಇಂಜಿನಿಯರಿಂಗ್ ಮಾಡ್ತಾ ಉಟ್ಟು.

ಈಗ ಅವಂಗೆ ರಜೆ. ಅವನೊಟ್ಟಿಗೆ ಎರ್ಡ್ ಬೇರೆ ಹೈದಂಗಳೂ ಇದ್ದೊ. ಅಂವ ಬಂದಾಂಗೆ "ಹಾಯ್ ಚಾಂಪ" ಅಂತ ಹೇಳಿ ಕುರ್ಸಿಲಿ ಕುದ್ರಿಕೆ ಹೋತ್.

ಈ ನಮ್ಮ ಚಾಂಪಂಗೆ ಎಲ್ಲಿತ್ತೊ ಸಿಟ್ಟ್, ಹಾಯ್ ನಿನ್ನ ಮನೆಲಿ ಇಸಿಕ, ಸುರುಲಿ ಹಿರಿಯರ ಎದುರು ಹೇಂಗೆ ಇರೊಕುತ ತಿಳ್ಕತ ಹೇಳಿ ಅವನ ಬಾಯಿ ಮುಚ್ಚಿಸಿದೊ. ಹಾಂಗೆ ಹೊರಗೆ ಹೋದ ಹೈದ ಆ ಮೊಬೈಲ್‌ನ ಒತ್ತಿಕಂಡ್ ಏನೊ ಮಾಡ್ತಿತ್. ಚಾಂಪಂಗೆ ಅದರ ನೋಡಿ ಪುನಃ ಸಿಟ್ಟ್ ಬಾತ್. "ಆ ಒಂದು ಮೊಬೈಲ್ ಬಂದ ಮೇಲೆ ಈಗನ ಮಕ್ಕಳಿಗೆ ಲೋಕ ತಲೆಕೆಳಗಾದರೂ ಗೊತ್ಲೆಂತ". ಬೈಯಕೆ ಶುರುಮಾಡ್ದೊ. ಹೀಂಗೆ ಮಾತಾಡಿಕಂಡ್ ಮಾತಾಡಿಕಂಡ್ ಹೊತ್ತ್ ಹೋದೇ ಗೊತ್ತಾತ್ಲೆ. ಅಲ್ಲಿ ಹಿಂದೆ ಅಡುಗೆ ಮನೆಲಿ ಕೊಟಿಗೆಲಿ ನಮ್ಮ ಹೆಂಗ್‌ಸ್‌ಗಳ ಪಟ್ಟಾಂಗ ಒಂದು ಬೇರೆನೇ ತರ.

ಆಗ ಪೂಜಾರ್ಕೆ ಮಾಡ್ತಾ ಇದ್ದ ಪುಟ್ಟ, "ಚಾಂಪ ಗಂಟೆ ಆಕಂಡ್ ಬಾತ್, ಬಳ್ಸಮೊನ?" ಅಂತ ಹೇಳ್ತ್. ಇದರ ಕೇಳ್ದ ತಾತ ನೆಣೆಬತ್ತಿ, ಕಿಳ್ಳಿ, ಅಡ್ಕೆ ಹೋಳು ಎಲ್ಲ ರೆಡಿ ಇದ್ದರೆ ಬಳ್ಸೊಮೋಂತ ಹೇಳ್ದೊ. ಹೀಂಗೆ ಚಾಂಪ ಮತ್ತೆ ಪುಟ್ಟ ದೇವರ ಕೋಣೆಗೆ ಹೋಗಿ ಅಗ್‌ಳ್ ಬಳ್ಸಿಕೆ ಏರ್ಪಾಟ್ ಮಾಡ್ದೊ. ಈ ಚಾಂಪ ಪುಟ್ಟಂಗೆ, ಎಲೆನ ಹಂಗೆ ಹಾಕ್, ಬತ್ತಿನ ಇಸ್, ಗಂಧದೂಪ ಕೊಡುಂತ ಒಂದೊಂದೆ ಹೇಳಿಕಂಡ್ ಇದ್ದೊ. ಈ ಪುಟ್ಟ ಮನ್ಸ್‌ಲೇ ಚಾಂಪಂಗೆ ನಾಕ್ ಬೈಕಂಡತ್. ಹಾಂಗೆ ಎಲ್ಲಾ ಬಳ್ಸಿ ಆತ್. ಚಾಂಪ ಎಲ್ಲವರ ಕೈ ಮುಗಿಯಕೆ ಕರ್ದೊ. ಈ ಬೋಜವ್ವ ತಾನಿತಾನಿತ ಮೆಲ್ಲ ಬಂದ್ ನಿಂತ್‌ಕಂಡೊ. ಪುಟ್ಟ ಎಲ್ಲೊವ್ಕ ಅಕ್ಕಿ ಕೊಟ್ಟತ್. ಆಗ ಚಾಂಪ ಯಾರಾರ್ ಎರ್ಡ್ ಮಾತ್ ಹೇಳಿಕಣಿಂತ ಹೇಳ್ದೊ. ಇದರ ಕೇಳ್ದ ಯಾರೋ ಒಬ್ಬ ಹಿಂಗಡೆಂದ ಓ ಚಾಂಪ ಇಲ್ಲಿ ನೀವೇ ಹಿರಿಯೊವು, ನಿಮ್ಮಿಂದ ಹಿರಿಯೊವು ಯಾರೊಳ ಇಲ್ಲಿ, ನೀವೇ ಹೇಳಿಕಣಿಂತ ಹೇಳ್ದಂಗಾತ್.

ಹಂಗೆ ತಾತ ಶುರು ಮಾಡ್ದೊ. "ಸ್ವಾಮಿಂತೇಳಿ ಹೇಳಿಕಂಬೊದುತೇಳ್ರೆ, ನಮ್ಮ ಕುಟುಂಬಲಿ ವರ್ಷಂಪ್ರತಿ ಕೊಡುವಂತ ಒಂದು ಹರಿಕೆನ ಇಂದ್ ಕೊಡ್ತಾ ಒಳೊ. ಕೊಡ್ದರ್ಲಿ ಸ್ವಲ್ಪ ಹಿಂದು ಮುಂದು, ಹೆಚ್ಚು ಕಮ್ಮಿ ಆಗಿರ್ದು. ಆದರೂ ಆ ಸ್ವಾಮಿ ಇದರ ಸ್ವೀಕಾರ ಮಾಡಿಕಣಕು. ಹಂಗೆನೆ ಇಂದ್ ಸರ್ವರೂ ಸೇರಿಕಂಡ್ ಒಂದೇ ಮನ್ಸ್‌ಲಿ ಈ ಎಡೆನ ಬಳ್ಸಿಯೊಳೊ. ಇದರ್ಲಿ ಹಲವಾರು ರೀತಿಯ ತಪ್ಪು ಒಪ್ಪುಗ ಇರ್ದು. ಹಾಂಗೆನೆ ಪೂಜಾರಿ ಮಿಯ್ದು ನೀರ್‌ಲಿ ಆಗಲಿ, ಉಟ್ಟ

ಮಡಿಲಿ ಆಗಿಲಿ, ಕೊಂದ ಕೋಳಿಲಿ ಆಗಲಿ, ಮಾಡಿದಂತ ಅಡಿಗೆಲಿ ಆಗಲಿ, ಬಳ್ಸಿದ ಎಡೆಲಿ ಆಗಲಿ, ಹೋಸಿದ ನಂದಾದೀಪಲಿ ಆಗಲಿ ಸುಮಾರ್ ತಪ್ಪುಗ ಇರುವೊ. ಅದ್ ಏನೇ ಇದ್ದರೂ ಕೂಡ ಆ ಮಾಯೆ ಒಪ್ಪಿಕಂಡ್ ಈ ಕುಟುಂಬಕ್ಕೆ ಒಳ್ಳೆದು ಮಾಡೊಕು. ಹಂಗೆ ಈ ನಮ್ಮ ಕುಟುಂಬದವು ಮಾಡುವ ಯಾವುದೇ ಕೆಲ್ಸ ಕಾರ್ಯ ಆ ಮಹಾಸ್ವಾಮಿ ಅನುಗ್ರಹ ಮಾಡಿಕಂಡ್, ಮಕ್ಕಮರಿಗಳ ವಿದ್ಯಾಭ್ಯಾಸಕ್ಕೆ, ಮಾಡುವಂತ ಉದ್ಯೋಗಕ್ಕೆ, ದನಕರ್‌ಗಳಿಗೆ, ಅಲಫಲ, ಬಿತ್ತಿದ ಬೆಳೆಗಳಿಗೆ ಏನೊಂದು ತೊಂದರೆ ತೊಡಕುಗ ಬಾರದಂತೆ ಕಾಪಾಡಿಕಂಡ್ ಮಾರಿ ಬೀದಿಗೆ ನೀ ಬೇಲಿಯಾಗಿ ನಿತ್ತ್ ಈ ಕುಟುಂಬದ ರಕ್ಷಣೆ ಮಾಡೊಕು ಸ್ವಾಮೀ.... ದೇವಾ... ಈ ಮಾತ್ ನಾವು ಹೇಳ್ದು ಅಲ್ಲ, ನಮ್ಮ ಹಿರಿಯೊವು ಹೇಳಿಕಂಬೊದುತೇಳಿ ಅಡ್ಡ ಬಿದ್ದೊ. ಅಷ್ಟೊತ್ತಿಗೆ ಹಿಂದೆ ಇದ್ದ ಯಾರೋ ಒಬ್ಬ ಕುಯ್ಕಂತೇಳಿ ನೆಗಾಡಿಕೆ ಶುರು ಮಾಡ್ತ್. ಇದರ ಕೇಳ್ದ ಚಾಂಪ. ಹಾ... ಈಗ ನೆಗಾಡಿ... ನೆಗಾಡಿ... ನಿಮ್ಮ ಕಾಲಕ್ಕಾಕನ ಹೇಂಗೆನೋ..? ಅಂತ ಹೇಳಿಕಂಡ್ ಹೊರಗೆ ಬಂದೊ.

ಎಂತದೊ, ಎಲ್ಲೊವು ಅಕ್ಕಿ ಹಾಕಿ ಕೈ ಮುಗ್ದ್ ಹೊರಗೆ ಬಂದೊ. ಪೂಜಾರಿ ನೀರ್ ಹಾಕಿ ಎಡೆನ ಸ್ವಲ್ಪ ಜಾರ್‍ಸಿ, ಇನ್ನ್ ತೆಗೆಮೊ ಅಲ ಚಾಂಪಾತ ಹೇಳ್ತ್. ಆ ಮೇಲೆ ಊಟಕ್ಕೆ ರೆಡಿ ಮಾಡ್ದೊ. ಅಷ್ಟೊತ್ತಿಗೆ ಒಳ್ಳ ಆರ್ಮಿ ಮಾಲ್ 2 ಕುಪ್ಪಿ ಹೊರಗೆ ಬಾತ್. ಇದರ ನೋಡಿ ಕೆಲವರ ನರ ನೆಟ್ಟಂಗೆ ಆತ್. ಚಾಂಪ "ಇಂದನೆ ನಂಗೆ ಒಂದು ನೈಂಟಿ ಹಾಕಿ ಅದ್ಕೆ ಹನೀಸ್ ನೀರ್ ಮಿಕ್ಸ್ ಮಾಡಿ ಕೊಡುನೆ" ಅಂತ ಹೇಳ್ದೊ. ಅಜ್ಜಿಕ, ಹೆಂಗ್‌ಸ್‌ಗ ಮೆಲ್ಲ ಸೆರ್‍ಗ್ ಮರೆ ಮಾಡಿ ಒಂದು ತರ್‍ಪಿ ತರ್‍ಪಿ ಹಾಕಂಡೊ.

ಹಂಗೆ ಎಲ್ಲೊವು ಊಟಕ್ಕೆ ರೆಡಿ ಆಗಿ ಊಟನೂ ಮಾಡ್ದೊ. ಭಾರೀ ಪಟ್ಟಾಂಗ ಶುರ್ ಆತ್. ಬೇಗ ಮನೆಗೆ ಹೋಗವೆಲ್ಲ ಹೋದೊ. ಕೆಲವು ಗಂಡ್‌ಗ ಹಿಂದೆನ ಕಾಲದ ಬೇಟೆ, ಮೀನು ಹಿಡಿಯೊದು ಹಿಂಗೆ ತಮ್ಮ ಹಳೇ ಅನುಭವಗಳ ಮಾತಾಡಿಕಂಡ್ ಇದ್ದೊ. ಹೆಂಗ್‌ಸ್‌ಗ ಮಾತ್ರ ಒಂದು ರೂಮ್‌ಲಿ ಕುದ್ದ್‌ಕಂಡ್ ಹೊಸ ಸೀರೆ, ಹಳೆ ಬಳೆಂತೇಳಿ ಮಾತಾಡಿಕಂಡಿದ್ದೊ.

✍ಪ್ರಜ್ವಲ್ ಬೊಳ್ತಾಜೆ

## ಬಾಲ್ಯಲಿ ಇಸ್ಕೂಲಾಟ

# ರದ್ದ್ ರದ್ದ್ ರಾಯನ ಮಗಳ್

ಅದೊಂದು ಗೂಡೆಗಳ ಸಾಲೆ. ಏಳ್ನೇ ತರಗತಿ ಮುಟ್ಟ ಕಲ್ಸ್‌ತಿದ್ದೊ. ಹಿಂಬೊತ್ತ್ ನಾಕ್ ಗಂಟೆ ಹೊತ್ತ್. ಡಣ್, ಡಣ್, ಡಣ್‌ಂತ ಮೂರು ಸಲ ಗಂಟೆ ಹೊಡ್ದೊ. ಆಗ ಮಕ್ಕ ಎಲ್ಲಾ ಎದ್ದ್‌ಕಂಡ್, ಹೆಗ್ಲ್‌ಗೆ ಚೀಲನ ಕೋಸಿಕಂಡ್, ಮನೆಗೆ ಹೋವ ಅಮ್ಸರಲಿ ಬಾಕಿಲ್ ಹಕ್ಕಲೆ ಬಂದೊ. ಬಾಕಿಲ್‌ಲಿ ನಿತ್ತ ಟೀಚರಮ್ಮ ಬಾಕಿಲ್‌ಗೆ ಅಡ್ಡ ಕೈ ಹಿಡ್ದ್,

"ಮಕ್ಕ ಎಲ್ಲಾ ಆಟ ಆಡಿನೇ ಮನೆಗೆ ಹೋಕು"ಂತ ಹೇಳ್ದೊ. ಮಕ್ಕ ಉಪಾಯ ಇಲ್ಲದೆ ಆಟದ ಮೈದಾನದ ಮೂಲೆಲಿ ಚೀಲನೆಲ್ಲಾ ರಾಸಿ ಹಾಕಿ ಟೀಚರಮ್ಮನ ಹಕ್ಕಲೆ ಬಂದೊ.

'ಇಂದ್ ಯಾವ ಆಟ ಆಡ್ದು ಟೀಚಾ?'– ಎಂತ ಕೇಳ್ದೊ.

ಟೀಚರ್ ಮಕ್ಕಳ ಎಲ್ಲಾ ಉರುಂಟಾಗಿ ಕೋಟೆನ ಹಾಂಗೆ ನಿಲ್ಲಿಕೆ ಹೇಳ್ದೊ. ಒಬ್ಬನ ಕೈನ ಒಬ್ಬ ಹಿಡ್ಕಂಡ್ ಅಗಲ್ಸಿ ನಿಲ್ಸಿದೊ.

'ಈಗ ಎಲ್ಲೋವೂ ಕೈನ ಬುಟ್ಟ್ ನೆಟ್ಟಂಗೆ ನಿಲ್ಲಿ' – ಟೀಚರ್ ಹೇಳ್ದೊ. ಅವು ಹೇಳ್ದಾಂಗೆ ಮಕ್ಕ ನೆಟ್ಟಂಗೆ ನಿತ್ತೊ. ಎರ್ಡ್ ಗೂಡೆಗಳ ಕರ್ದ್‌ದ್, ಕೋಟೆ ಹಾಂಗೆ ನಿತ್ತ ಒಂದು ಗೂಡೆನ ಹಿಂದೆ, ಮುಂದೆ ಅವರ ನಿಲ್ಲಿಸಿದೊ. ಅವರಿಬ್ಬರ ಕೈಗೆ ಒಂದು ಅಡಿಕೋಲು ಕೊಟ್ಟ್ ಹಿಡ್ಕಂಬಕೆ ಹೇಳ್ದೊ. ಕೋಟೆನ ಒಳಗೆ ನಿತ್ತ ಗೂಡೆ ಒಂದು ಕೊಡಿನ ಹಿಡ್ತ್. ಹೊರಗೆ ನಿತ್ತ ಗೂಡೆ ಇನ್ನೊಂದು ಕೊಡಿನ ಹಿಡ್ತ್.

'ನೀವಿಬ್ಬೊರು ನಾ ಪದ ಹೇಳ್ದಾಂಗೆ ಆ ಅಡಿಕೋಲ್ನ ಒಬ್ಬೊಬ್ಬ ಗೂಡೆನ ತಲೆ ಮೇಲೆಂದ ಹಿಡ್ಕಂಡ್ ಸುತ್ತು ಬರೋಕು'– ಎಂತ ಹೇಳಿ,

'ರದ್ದೊ ರದ್ದ್ ರಾಯನ ಮಗಳ್, ಬಿದ್ದೋ ಬಿದ್ದ್ ಭೀಮನೆ ಮಗಳ, ಹದಿನಾಲ್ಕೆಮ್ಮೆ ಕಟ್ಟಾಲಾರೆ, ನಾಯಿಗನ್ನ ಹಾಕಲಾರೆ, ಬೆಕ್ಕಿಗನ್ನ ಹಾಕಲಾರೆ, ಬಾಳ್ ಗುಬ್ಬಿ ಬಾಳೆಕಂಬ'– ಎಂತ ಪದ ಹಾಡಿಕೆ ಸುರು ಮಾಡ್ದೊ. ಪದ ನಿಲ್ಲಿಕನ ಆ ಅಡಿಕೋಲು ಯಾರ ತಲೆ ಮೇಲೆ ಬಾತೋ ಅವರ ತಲೆಗೆ ಆ ಕೋಲುನ ತಾಂಗಿಸಿಕನ, ಕೋಟೆ ಒಳಗೆ ನಿತ್ತ ಗೂಡೆನ ಹಕ್ಕಲೆ,

'ನೀ ಅಡಿಕೋಲ್ ತಾಂಗಿಸಿದ ಗೂಡೆನ ಎರ್ಡ್ ಹೆಗ್ಲ್‌ನ ಎರ್ಡ್ ಕೈಲಿ ಹಿಡ್ದ್, ಅದರ ಕುದ್ರ್‌ಸ್' – ಎಂತ ಹೇಳ್ದೊ.

ಒಳಗೆ ನಿತ್ತ ಗೂಡೆ ಅಡಿಕೋಲ್‌ನ ಹೊರಗೆ ನಿತ್ತ ಗೂಡೆನ ಕೈಲಿ ಕೊಟ್ಟ್, ಎರ್ಡ್ ರಟ್ಟೆ ಹಿಡ್ದ್, ಕೋಟೆಲಿ ನಿತ್ತ ಗೂಡೆನ ಕುದ್ರಿಸಿದೆ.

'ಈಗ ಆಟನ ಮುಂದರ್‍ರೊನ್ನೊ' – ಎಂತ ಟೀಚರ್ ಹೇಳಿ, ಪದ ಹಾಡಿಕೆ ಸುರು ಮಾಡ್ದೊ. ಪದ ನಿಲ್ಲಿಕಾಕನ ಯಾರ ತಲೆಮೇಲೆ ಅಡಿಕೋಲು ಬಂದದೆನೋ ಅವರ ಕುದ್ರಿಸಿಕೆ ಹೇಳ್ವೆ, ಕುದ್ದ ಗೂಡೆಗ ಕುಸಿಂದ ಕುದ್ದೊ.

ಈ ಸಲ ಟೀಚರಮ್ಮ ಅಕೆರಿಗೆ 'ಬಾಳ್ ಗುಬ್ಬಿ, ಕಲ್ಲ್‌ಕಂಬ'– ಎಂತ ಹೇಳಿ, ಕೋಲು ಮುಟ್ಟಿಸಿಕಂಡ ಗೂಡೆಗೆ, 'ನೀ ಕಲ್ಲ್ ಕಂಬದ ಹಾಂಗೆ ನಿಲ್ಲೊಕು ಬಲಾ. ಸುಲಭಲಿ ಕುದ್ರ್‌ಬಡ' – ಎಂತ ಹೇಳ್ದೊ. ಅವು ಹೇಳ್ದಾಂಗೆ ಕೋಲು ಮುಟ್ಟಿಸಿಕಂಡ ಗೂಡೆ ಕಲ್ಲ್‌ನಾಂಗೆ ನಿತ್ತದೆ. ಕೋಟೆನ ಒಳಗೆ ಇದ್ದ ಗೂಡೆ ಅದರ ಎರ್ಡ್ ಹೆಗ್ಲ್‌ಗೆ ಎರ್ಡ್ ಕೈನ ಇಸಿ ಜಗ್ಗಿಸಿರೂ ಅದ್ ಸುಲಭಲಿ ಬಗ್ಗುದ್ಲೆ. ಆಗ ಹೊರಗೆ ನಿತ್ತ ಕೋಲು ಹಿಡ್ದ ಗೂಡೆಗೂ ಟೀಚರಮ್ಮ ಹೇಳ್ವೆ,

'ನೀನೂ ಅದರ ಕುದ್ರಿಸಿಕೆ ಸೇರಿಕ'–ಎಂತ. ಇಬ್ಬೊರು ಸೇರಿ ಗೂಡೆನ ಕುದ್ರುಸುವೆ. ಒಳ್ದ ಗೂಡೆಗ ಎಲ್ಲಾ ಈ ಮೋಜಿನ ಆಟನ ನೋಡಿ ನೆಗಾಡಿಕೆ ಸುರು ಮಾಡ್ದೊ. ಮೂರ್‍ನೇ ಸಲ ಹಾಡಿಕಾಕನ ಎಲ್ಲೋವೂ ಟೀಚರಮ್ಮ ಕಲ್ಲ್ ಕಂಬಾಂತ ಹೇಳಲಿ ಎಂತ ಆಸೆ ಪಟ್ಟವೆ. ಟೀಚರಮ್ಮ ಬಡಕಲ್ ಗೂಡೆಗಳ ತಲೆ ಹಕ್ಕಲೆ ಕೋಲು ಬಾಕಾಕನ ಬಾಳೆ ಕಂಬಾಂತ ಹೇಳ್ವೆ, ಗಟ್ಟಿ ಮುಟ್ಟಾದ ಗೂಡೆಗಳ ತಲೆ ಹಕ್ಕಲೆ ಕೋಲು ಬಾಕಾಕನ ಕಲ್ಲ್ ಕಂಬಾಂತ ಹೇಳಿವೆ. ಹೀಂಗೆ ಆಟನ ಹುರ್‍ಪಲಿ ಮುಂದರ್‍ಸುವೆ. ನಿತ್ತ ಗೂಡೆಗ ಯಾಗ ಕೋಲು ನಮ್ಮ ತಲೆಗೆ ಮುಟ್ಟಿದೆನೋಂತ ಕಾದ್‌ಕಂಡಿದ್ದದೆ. ಹೀಂಗೆ ಎಲ್ಲೋವೂ ಕುದ್ದಾದ ಮೇಲೆ, ಟೀಚರಮ್ಮ ಅವರ ಕೈಲಿದ್ದ ದೊಡ್ಡ ಟವಾಲ್‌ನ ಮೂಲೆಂದ ಮೂಲೆಗೆ ಸರಿ ಅರ್ಧ ಮೊಡ್ಚಿ ಅದರ ಎರ್ಡ್ ಕೊಡಿನ ಎರ್ಡ್ ಕೈಲಿ ಅಗಲ್ಸಿ ಹಿಡ್ದ್, ತಿರ್‍ಗ್‌ಸುವೆ. ಆಗ ಅದ್ ಚಿರಿಂಟಿಕಂಡತ್. ಅದರ ಎರ್ಡ್ ಕೊಡಿಗಳ ಸೇರ್‍ಸಿ, ಕೊರ್‍ಡದ ಹಾಂಗೆ ಮಾಡಿ, ಒಂದು ಗೂಡೆನ ಕೈಲಿ ಕೊಟ್ಟವೆ.

'ನೀ ಇದರ ಎಲ್ಲಾ ಗೂಡೆಗಳ ಬೆನ್ನ್ ಹಿಂದೆ ಸುತ್ತೋಳು ಕೊಂಡೋಗಿ, ಒಂದು ಗೂಡೆನ ಬೆನ್ನ್ ಹಿಂದೆ ಹಾಕ್'ಂತ ಹೇಳಿವೆ.

ಗೂಡೆಗ ಎಲ್ಲಾ ಕೋಟೆನ ಒಳಗೆ ಮೋರೆ ಮಾಡಿ ಕುದ್ದಿದ್ದೊ. ಅವರ ಬೆನ್ನ

ಹಿಂದೆ ಕೊರ್ಡನ ಹಿಡ್ದವ್ವು ಓಡಿಕಂಡ್, ಸುತ್ತ ಬಂದಕಂಡ್, ಒಂದು ಗೂಡೆನ ಕುಂಡೆ ಹಿಂದೆ ಹಾಕಿದೆ.

'ಯಾರುನೂ ತಿರ್‍ಗಿ ನೋಡಿಕೆ ಬೊತ್ತ್'-ಎಂತ ಟೀಚರ್ ಹೇಳಿವೆ. ಕುಂಡೆ ಹಿಂದೆ ಹಾಕಿದ ಕೊರ್ಡ್ ಆ ಗೂಡೆಗೆ ಗೊತ್ತಾತ್ಲೆ. ಕೊರ್ಡ್ ಹಾಕಿದ ಗೂಡೆ ಒಂದು ಸುತ್ತು ಬಂದ್, ಹಿಂದೆ ಹಾಕಿದ ಕೊರ್ಡ್‌ನ ತೆಗ್ದ್, ಗೂಡೆನ ಬೆನ್ನ್‌ಗೆ ಕೊರ್ಡ್‌ಲಿ ಬೊಡ್ದದೆ. ಕುದ್ದ ಗೂಡೆ ಎದ್ದ್ ಓಡಿದೆ. ಅದ್ ಒಂದು ಸುತ್ತು ಓಡಿಕಂಡ್ ಹೋಗಿ ತಿರ್‍ಗ ಅದರ ಜಾಗೆಲಿ ಕುದ್ದದೆ. ಅಸ್ಟಾಕನ ಮುಟ್ಟ ಕೊರ್ಡ್ ಹಿಡ್ದ ಗೂಡೆ ಅದರ ಬೆರ್‍ಸಿಕಂಡ್, ಬೆರ್‍ಸಿಕಂಡ್ ಹೋಗಿ ಕೊರ್ಡ್‌ಲಿ ಬೊಡ್ದದೆ. ಓಡುವ ಗೂಡೆ ತೊಪ್ಪಿಸಿಕಂಡ್, ಅದರ ಜಾಗೆಲಿ ಬಂದ್ ಕುದ್ದದೆ. ಕುಂಡೆ ಹಿಂದೆ ಹಾಕಿದ ಕೊರ್ಡ್ ಕುದ್ದ ಗೂಡೆಗೆ ಗೊತ್ತಾದರೆ ಅದೇ ಎದ್ದ್ ಕೊರ್ಡ್ ಹಾಕಿದ ಗೂಡೆನ ಓಡ್ಸಿದೆ. ಹೀಂಗೆ ಆಟ ಮುಂದರ್‍ದದೆ. ಅಸ್ಟಾಕನ ಗಂಟೆ ನಾಕ್‌ವರೆ ಆತ್. ಡಣ, ಡಣ, ಡಣ – ಅಂತ ಒಂದೇ ಸಮ ಗಂಟೆ ಹೊಡ್ದದೆ. ಮಕ್ಕ ಎಲ್ಲಾ ಎದ್ದ್, ಬಿದ್ದ್ ಅವರವರ ಚೀಲಗಳ ಕೋಸಿಕಂಡ್ ಮನೆಗೆ ಓಡ್ದೊ.

✍ಎಂ. ಜಿ. ಕಾವೇರಮ್ಮ

* ಕುರ್ಚಿ ಮುಖ್ಯ ಅಲ್ಲ, ಅಲ್ಲಿ ಕೂರೊವು ಮುಖ್ಯ.
* ಅಧಿಕಾರಕ್ಕೆ ಯಾರೋ ಬಂದವೆ, ಯಾರೋ ಹೋದವೆ, ಆದರೆ ಕೆಲವು ಮಾತ್ರ ಮನ್ಸ್‌ಲಿ ಒಳ್ದವೆ.
* ಬಿದ್ದ್ ಹುಟ್ಟಿದ ಗಿಡಕ್ಕೆ ಬೆಳಿಯೊದು ಗೊತ್ತ್.
* ಕೂಳಿನೂ ಉಟ್ಟು, ಪೊಡನೂ ಉಟ್ಟು, ಕುಡೆಕೆ ಮಾತ್ರ ನೀರಿಲ್ಲೆ.
* ಚಾಳೆ ಮರದ ಕೆಳಗೆ ಕೂರುಬೇಡ, ಕಡಂದಿ ಇರುವ ಮರಕ್ಕೆ ಹತ್ತ್‌ಬೇಡ.

✍ಸಂ.

ಚಿಂತನೆ-1

## ಅರ್ಥ, ಹುರ್ಪು ಕಮ್ಮಿ ಆಕಂಡ್ ಇರುವ ಹಬ್ಬಗ

ಹಬ್ಬ ಹರಿದಿನಗ ಭಾರತದವರ ಬೊದ್ಕ್‌ನ ಭಾಗ ಆಗಿದ್ದ್, ಅವರ್ಲಿ ಹುರ್ಪು, ಉಲ್ಲಾಸ ಮೂಡ್ಸುವ ಸಂದರ್ಭಗ ಅವು. ಯಾಗೋಳುನ ದುಡ್ತಂದ ಬುಡ್‌ಗಡೆ ಆಗಿ ಒಂದಷ್ಟ್ ಸಂತೋಸು ಲವಲವಿಕೆ ಪಡ್ಕಂಬಕೆ ಜನ ಕಂಡ್‌ಕಂಡ ಪರ್ವ ದಿನಗಳೇ ಹಬ್ಬಗ. ಹಬ್ಬಗಳ್ಲಿ ನಾನಾ ವಿಧಗ ಹಾಂಗೂ ಆಚರ್ಣೆಲಿ ವೈವಿಧ್ಯತೆಗ ಒಳೊ. ಪರಂಪರೆಂದ ಬಂದ ಸಾಂಸ್ಕೃತಿಕ ಹಬ್ಬಗ, ನಾಡ ಹಬ್ಬಗ, ರಾಷ್ಟ್ರೀಯ ಹಬ್ಬಗ, ಹುಟ್ಟು ಹಬ್ಬಗ - ಹೀಂಗೆ ಹಲೊವು ರೀತಿನ ಹಬ್ಬಗ ಜನಜೀವನಲಿ ಹಾಸ್ ಹೊಕ್ಕಾಗಿ ಒಳೊ.

ಹಬ್ಬಗಳ್ಲೆಲ್ಲ ವಿಶೇಷ ಹಬ್ಬ ದೀಪಾವಳಿ. ಭಾರತ ದೇಶದ ಉದ್ದಗಲಲಿ ಆಚರ್ಸುವ ಈ ಹಬ್ಬ ಅದ್ ಸಾರ್‌ವ ಸಂದೇಶ, ಅದರ ಪೊರ್ಲು ಮತ್ತೆ ಅದರ ಜೀವಂತಿಕೆಂದ, ಹಿರಿಕಿರಿಯೊವ್ಕೆ ಅದ್ ತುಂಬುಸಿ ಕೊಡುವ ನವೋಲ್ಲಾಸಂದಾಗಿ ಅದ್ಕೆ ಹಿರಿ ಸ್ಥಾನನ ಕಲ್ಪುಸಿ ಕೊಟ್ಟುಟ್ಟು. ಹಾಂಗಾಗಿಯೇ ಅದ್ಕೆ "ದೊಡ್ಡ ಹಬ್ಬ"ತೇಳುವ ದೊಡ್ಡ ಹೆಸ್‌ರ್. ಬೇಸಾಯದೊಟ್ಟಿಗೆ ಬೆಸ್ದ್‌ಕಂಡ್ ಇರ್‌ವ ಈ ಹಬ್ಬಕ್ಕೆ ವಿಶೇಷ ಆದ ಸಾಂಸ್ಕೃತಿಕ ಮಹತ್ವನೂ ಉಟ್ಟು. ಬೊಳ್ಪುನ ಹಬ್ಬ ಆದ ಈ ದೀಪಾವಳಿ ಅಜ್ಞಾನದ ಕತ್ತಲೆನ ಕಳ್ದ್ ಜ್ಞಾನದ ಬೊಳ್ಪುನ ಬೀರುವ ಹಬ್ಬ. ಹೊಸ ಬಟ್ಟೆ, ಗಮ್ಮತ್‌ನ ಊಟ, ಪಟಾಕಿ ಬುಡುವ ಗೌಜಿ, ಬಲೀಂದ್ರ ಪೂಜೆ, ಗೋಪೂಜೆ, ಅಂಗ್‌ಡಿ ಪೂಜೆ ಎಲ್ಲ ಸೇರಿಕಂಡ್ ದೀಪಾವಳಿನ ಎಂದೂ ಮರಿಯದ ಹಾಂಗೆ ಮಾಡಿಟು.

ಇನ್ನ್ ನಾಗರಪಂಚಮಿ, ಶ್ರೀ ಕೃಷ್ಣ ಜನ್ಮಾಷ್ಟಮಿ, ಚೌತಿ, ಯುಗಾದಿ - ಈ ಎಲ್ಲ ಹಬ್ಬಗಳ ಆಚರ್ಣೆಗ ಬೇರೆ ಬೇರೆ ರೀತಿ ಇದ್ದ್ ಪ್ರಾದೇಶಿಕ ವೈವಿಧ್ಯದೊಟ್ಟಿಗೆ ಅದರ್‌ದ್ದೇ ಆದ ಆಧ್ಯಾತ್ಮಿಕ, ಸಾಂಸ್ಕೃತಿಕ ಮಹತ್ವನ್ನೂ ಹೊಂದಿಯೊಳೊ. ಬುದ್ಧಜಯಂತಿ, ಮಹಾವೀರ ಜಯಂತಿ ಮುಂತಾದ್ದ್ ದೇಶದ ಆಧ್ಯಾತ್ಮಿಕ ಪ್ರವರ್ತಕರ ಹಬ್ಬಗ ಆದರೆ ರಂಜಾನ್, ಕ್ರಿಸ್ಮಸ್, ಮಾಪ್ಳೆಗಳ ಪುರ್ಬುಗಳ ಮುಖ್ಯ ಹಬ್ಬಗ. ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯ ದಿನಾಚರಣೆ ರಾಷ್ಟ್ರೀಯ ಹಬ್ಬಗ. ಆದರೆ ದಸರಾ ಇತ್ಯಾದಿ ನಾಡ ಹಬ್ಬಗ. ಗಾಂಧೀಜಯಂತಿ, ಮಕ್ಕಳ ದಿನಾಚರಣೆ, ಶಿಕ್ಷಕರ ದಿನಾಚರಣೆ ಇತ್ಯಾದಿ ರಾಷ್ಟ್ರ ಪುರುಷರ ಹುಟ್ಟು ಹಬ್ಬಗ. ಆದರೆ ಫಾದರ್ಸ್‌ಡೇ, ಮದರ್ಸ್‌ಡೇ ಇತ್ಯಾದಿ ಇತ್ತೀಚೆಗೆ ದೇಶದ ಒಳಗೆ ಹುಕ್ಕಂಡ ಹೊಸ ರೀತಿನ ಹಬ್ಬಗ. ಏನೇಯಿರ್ಲಿ ನಾ ಇಲ್ಲಿ ಹೇಳಿಕೆ ಹೊರ್ಟದ್ ಈ ಎಲ್ಲ

ಹಬ್ಬಗ ಅರ್ಥ, ಉತ್ಸಾಹ ಕಳ್ಕಂಡ್ ಇರ್ದರ ಬಗ್ಗೆ.

ಹಿಂದೆ ಎಲ್ಲ ಶ್ರದ್ಧೆ ಭಕ್ತಿಂದ ಆಚರ್ಸಿಕಂಡ್ ಬಾತಿದ್ದ ಈ ಹಬ್ಬಗ ಇಂದ್ ಒಂದೋ ಆಡಂಬರದ ಇಲ್ಲೆ ಕಾಟಾಚಾರದ ಆಚರ್ಣೆಗ. ಸ್ವಾತಂತ್ರ್ಯ ದಿನಾಚರಣೆನ್ನೇ ತಕಣೊಣೊ. ಧ್ವಜದ ಕಟ್ಟೆನ ಸಿಂಗರ್ಸುದು, ತೋರಣಕಟ್ಟುದು, ದೇಶದ ಸ್ವಾತಂತ್ರ್ಯಕ್ಕಾಗಿ ತ್ಯಾಗ ಬಲಿದಾನ ಮಾಡ್ದ ವೀರಂಗಳ ನೆನ್ಪು ಮಾಡಿಕಂಬೊದು, ಶಾಲೆ ಮಕ್ಕಳಂದಲೂ ಭಾಷಣ ಮಾಡ್ಸುದು, ದೇಶಭಕ್ತಿ ಗೀತೆಗಳ ಹಾಡ್ಸುದು, ದೇಶಪ್ರೇಮದ ಘೋಷಣೆಗಳ ಹೇಳ್ಸುದು... ಒಟ್ಟುಲಿ ಸ್ವಾತಂತ್ರ್ಯದ  ಅಗತ್ಯನ ಮನದಟ್ಟ್ ಮಾಡಿಕಂಡ್ ದೇಶದ ಯೋಗ್ಯ ಪ್ರಜೆಗ ಆವ ಸಂಕಲ್ಪ ಮಾಡ್‌ದು ಒಂದು ಗಂಭೀರ ಆಚರ್ಣೆ ಆಗಿರ್ತಿತ್. ಆದರೆ ದಿನ ಹೋದ ಹಾಂಗೆ ಸ್ವಾತಂತ್ರ್ಯ ಸ್ವಚ್ಛಂಧತೆ ಆಗಿ, ಹಿರಿಯರ ತ್ಯಾಗ ಬಲಿದಾನಗ ಮರ್ತ್‌ಹೋಗಿ, ಬೇಕೋ ಬೇಡೊತ ಉಪಾಯ ಇಲ್ಲದ್ದಕ್ಕೆ ಆಚರ್ಸುವ ಹಬ್ಬ ಆಗಿ ಸ್ವಾತಂತ್ರ್ಯ ದಿನಾಚರಣೆ ಸೊರ್‍ಗಿಕಂಡ್ ಉಟ್ಟು. ಹೆಚ್ಚಿ ಕಮ್ಮಿ ಎಲ್ಲ ರಾಷ್ಟ್ರೀಯ ಹಬ್ಬಗಳ ಪರಿಸ್ಥಿತಿ ಇದೇ ಆಗುಟು.

ನವರಾತ್ರಿ, ಚೌತಿನಂತ ಸಾಂಸ್ಕೃತಿಕ ಹಬ್ಬಗಳ್ನೇ ತಕಂಡರೂ, ಅದರ ವೈಭವ ಕಮ್ಮಿ ಆದ್ದ್ ಎದ್ದ್ ಕಂಡದೆ. ಚೌತಿನಂದ್ ಇಲ್ಲೆ ಮತ್ತೆನ ಯಾದಾರ್ ಒಳ್ಳ ದಿನಲಿ ಮನೆ ತುಂಬುಸುವ ಅರ್ಥವತ್ ಆದ ಕಾರ್ಯಕ್ರಮ ನಡಿಯತಿತ್. ಗದ್ದೆಲಿ ಬೆಳ್ದ್ ಮಾಗಿದ ಬತ್ತದ ಕದ್‌ರ್‌ತೇಳುವ ಧಾನ್ಯಲಕ್ಷ್ಮಿನ ಬರಮಾಡಿಕಂಬ ಆಚರಣೆ ಅದ್. ಭೂಮಿತಾಯಿನ ಚೊಚ್ಚಲ ಮಕ್ಕಳ ಕೃತಜ್ಞತೆಗೆ ಸಾಕ್ಷಿ. ಅತ್ತಿ, ಅಶ್ವತ್ಥ, ಮಾಯಿನ ಮರ, ಹಲ್ಸಿನ ಮರ, ಬೆದ್‌ರ್ ಇಂತ ಮರಗಳ ಸೊಪ್ಪುಗಳ್ನೂ, ಪೊಲಿ ಬೊಳ್ಳಿನ್ನೂ ಹಿಂದೆನ ದಿನನೆ ಜೋಡ್ಸಿ ಇಸಿಕಂಡ್, ಮಾಣ್ದಿನ ಬೊಳ್‌ಪಿಗೆ ಮಿಯ್ದ್ ಗದ್ದೆಂದ ಕದ್‌ರ್‌ನ ತೆಗ್ದ್ ಪೂಜೆ ಮಾಡಿ ಎಲ್ಲ ಸೊಪ್ಪುಗಳ್ನೂ ಕದ್‌ರ್‌ನ್ನೂ ಕಟ್ಟಗಳ ಮಾಡಿ ದೇವ್ರ ಕೋಣೆ, ಬತ್ತದ ಕಡ್ಕೆ, ಅಡ್ಗೆಕೋಣೆ, ಹಟ್ಟಿಕೊಟೆಗೆ, ಚಾಳೆ, ಮಾಯ್ನ, ಹಲ್ಸಿನ–ಇಂತ ಫಲವೃಕ್ಷಗಳಿಗೆ ಕಟ್ಟಿ ಭೂಮಿತಾಯಿನ ಸ್ಮರಿಸಿಕಂಬೊದ್ ಎಂತಾ ಸಮೃದ್ಧ ಆಚರ್ಣೆ! ಇಂದ್ ಭತ್ತದ ಗದ್ದೆಗ ಮಾಯ ಆಗಿ ಅಲ್ಲಿ ಕಟ್ಟೋಣಗಳೂ, ಹಣಕಾಸ್‌ನ ಬೆಳೆಗಳೂ ತುಂಬಿ ಮನೆ ತುಂಬುಸುವಂತ ಒಳ್ಳ ಆಚರ್ಣೆಗ ಮರೆ ಆಕಂಡ್ ಒಳೊ.

ಎಲ್ಲಾ ಹಬ್ಬಗಳ್ಲಿಯೂ ಬಗೆ ಬಗೆ ಭಕ್ಷ್ಯ ಭೋಜ್ಯಗ ತಯಾರ್ ಆದವೆ. ಆಯಾ ಋತುಲಿ ಸಿಕ್ಕುವ ನೆಟ್ಟಿಕಾಯಿಗ, ಹೂ ಹಣ್ಣ್‌ಗ ಹಬ್ಬಕ್ಕೆ ಮೆರ್‌ಗ್‌ತಂದದೆ. ಬೇರೆ ಬೇರೆ ಹಬ್ಬಗಳ್ಲಿ ಬೇರೆ ಬೇರೆ ರೀತಿನ ಭಕ್ಷ್ಯಗ ತಯಾರ್ ಆದವೆ. ಇದ್ ಈ ದೇಶದ ಪಾಕ ವೈವಿಧ್ಯಕ್ಕೆ ಪೂರಕ ಆಗಿ, ಪೋಷಕ ಅಂಶಗಳ ಆಗರ ಆಗಿ

ಜನರ ಆರೋಗ್ಯ ಭಾಗ್ಯನ ಹೆಚ್ಚಿ ಮಾಡಿವೆ. ಈ ಸಮೆಲಿ ನಡಿವ ಸಾಂಸ್ಕೃತಿಕ ಕಾರ್ಯಕ್ರಮಗ, ಹಾಡ್, ಹಸೆಗ, ಪುರಾಣ ಪುಣ್ಯಕತೆಗ ಜನರ ಸುಸಂಸ್ಕೃತರ್ ಆಗಿ ಮಾಡಿವೆ.

ಈ ಹೊಸ ಕಾಲಲಿ ಹಬ್ಬ ಉತ್ಸವಗಳ ಸಂಖ್ಯೆ ಏನೋ ಹೆಚ್ಚಾಕಂಡ್ ಉಟ್ಟು. ಅದೇ ಹೊತ್ತುಗೆ ಆಚರ್ಣೆನ ಗುಣಮಟ್ಟ ಕಮ್ಮಿ ಆಕಂಡ್ ಉಟ್ಟು. ಜನರ ಜೀವನ ಶೈಲಿ ಬದಲಾಕಂಡ್ ಉಟ್ಟು. ಕಷ್ಟಪಟ್ಟ್, ಗಮನ ಕೊಟ್ಟ್ ವಿಶೇಷ ತಿಂಡಿಗಳ ಮನೆ ಮನೆಗಲ್ಲಿ ತಯಾರ್ಸುವ ಜಾಣತನ ಕಮ್ಮಿ ಆಕಂಡ್ ಉಟ್ಟು. ಹೋಳಿಗೆ ಆಗಲೀ, ಉಂಡೆ ಚಕ್ಕುಲಿ ಆಗಲೀ ಅಂಗ್‌ಡಿಗಲ್ಲಿ ಸಿಕ್ಕುದೂ ಇದ್ಕೆ ಒಂದು ಕಾರಣ. ಕುಟುಂಬಗ ಎಲ್ಲ ವಿಭಕ್ತ ಆಕಂಡ್ ಇದ್ದ್ ಅಡ್ಗೆನ ವಿಧನ್ನೂ, ಹದನ್ನೂ ಪ್ರತ್ಯಕ್ಷ ನೋಡಿ, ಮಾಡಿ ಕಲಿವ ಅವ್‌ಕಾಶ ಸಣ್ಣೊವ್ಕೆ ಇಲ್ಲದಾಂಗೆ ಆಗುಟು.

ಜಾಗತೀಕರಣತೇಳುವ ಭ್ರಮೆ ಸಂಸ್ಕೃತಿನ ಬೇರ್‌ನ ಅಲ್ಗಿಸಿಕಂಡ್ ಉಟ್ಟು. ಜಾಗತೀಕರಣದ ಪ್ರಭಾವ ಶಿಕ್ಷಣ, ಕೃಷಿ, ಕೈಗಾರಿಕೆ, ರಕ್ಷಣಾತ್ಮಕ ಒಪ್ಪಂದಗಳ ಮೇಲೆ ಇದ್ದ್ ದೇಶದ ಏಕಾಂತಕ್ಕೆ ಭಂಗ ತಂದದೆ. ದೇಶದ ಒಳಗೆನ ಹೊರೆಗೆನ ಸಂಗತಿಗ ಎಲ್ಲಾ ಬಟಾಬಯಲ್ ಆಕಂಡ್ ಉಟ್ಟು. ಏಕಾಂತಲಿ ಧ್ಯಾನಸ್ಥ ಆಗದ ದೇಶಲಿ ಉನ್ನತ ವಿಚಾರಗ, ಆದರ್ಶ ಆಚಾರಗ ಹುಟ್ಟಿಕಂಬೊದಾದರೂ ಹೇಂಗೆ? ವಿದೇಶಗಂಲ್ದ ತೂರಿ ಬಾವ ಆಚಾರ ವಿಚಾರಗ ದೇಶದ ಆಚಾರ ವಿಚಾರಗಳೊಟ್ಟಿಗೆ ಘರ್ಷಣೆ ಆಗಿ ಕಿಚ್ಚಿನ ಕಿಡಿಗಳ ಹಾರ್ಸಿ ಎಳೆ ಮನ್ಸ್‌ಗಳ ಗೊಂದಲಕ್ಕೆ ಈಡ್ ಮಾಡ್‌ದು ಎಡೆಬುಡದೆ ನಡ್ದದೆ. ಬೇರೆ ದೇಶದ್ದ್ ಕಳ್ಪೆ ಆದರೂ ಮೇಲ್‌ತ ಒಪ್ಪಿಕಂಬ ಅಪ್ಪಿಕಂಬ ಹುಂಬ ಮನಸ್ಥಿತಿ ಹಬ್ಬಗ ಅರ್ಥ ಕಳ್ಕಂಬಕೆ ಮುಖ್ಯ ಕಾರಣ.

ಇಂದ್ ಹಬ್ಬಗ ಮನರಂಜನೆನ ಸಾಧನ ಅಲ್ಲೇಲೆ. ಹಬ್ಬದ ಸಂದರ್ಭಲಿ ನಡಿವ ಆಟ, ಓಟ, ಪೊರ್ಸಂಗ, ಒಡ್ಸುವ ಕತೆ, ಹಾಡ್, ಕೊಣ್ತ ಇಂದ್ ಹೆಚ್ಚಿನೊವ್ಕೆ ಬೇಡ. ಟಿ.ವಿ. ತಿರ್ಗ್‌ಸಿರೆ ಅದ್ ಎಲ್ಲಾ ಕಣ್ಣ್ ಮುಂದೆ ಬಂದದೆ. ದೊಡ್ಡ ಪೇಟೆಗಲ್ಲಿ ಮಾಲ್ ಸುತ್ತುದು ಇನ್ನೊಂದು ರೀತಿನ ಮನರಂಜನೆ. ಹಳ್ಳಿ ಪೇಟೆತೇಳುವ ಯಾವ ಬೇದ ಇಲ್ಲದೆ ಎಲ್ಲವರ್ರೂ ಅಮ್‌ರಿಕಂಡ ಹೊಸ ರೋಗ ಸ್ಮಾರ್ಟ್ ಫೋನ್. ಅದರ್ಲಿ ಕಣ್ಣ್ ನೆಟ್ಟರೆ ಸುತ್ತೊಳು ಏನ್ ನಡ್ದದೆತೇ ಗೊತ್ತಾದ್ಲೆ. ಆದ್ದರ್‌ಂದ ಹಬ್ಬನ ಶ್ರದ್ಧೆಂದ ಆಚರ್ಸುದು ಕಮ್ಮಿ ಆಕಂಡ್ ಉಟ್ಟು. ಸ್ಥಳೀಯ ಆಗಿ ಹೇಳ್ದಾದರೆ ಸಾಂಪ್ರದಾಯಿಕ ಕೃಷಿ ಪದ್ಧತಿ ನಾಶ ಆಗಿ ರಸ್ತೆ ಕರೆನ ಭತ್ತದ ಗದ್ದೆಗ ಕಟ್ಟಡ ಕಟ್ಟುವ ನಿವೇಶನಗ ಆಗಿ, ಒಳನಾಡ್‌ನ ಗದ್ದೆಗ ವಾಣಿಜ್ಯ ಬೆಳೆಗಳ

ತೋಟ ಆಗಿ ಬದ್‌ಲ್ ಆದ್ದರ್‌ಂದ ಹೆಚ್ಚಿನಂಶ ಕೃಷಿಗೆ ಸಮ್ಮಂದ ಪಟ್ಟ ಹಬ್ಬಗ ಅರ್ಥ ಕಳಕಂಡ್ ಒಳೊ.

ಹಬ್ಬ ಹುಣ್ಣಿಮೆಗಳ್ಲಿ ಮಾತರ ಗದ್ದಳ, ಒಳ್ದ ದಿನಗಳ್ಲಿ ಮಾಮೂಲಿ ಅಡ್ಗೆತೇಳುವ ಪದ್ಧತಿ ಏನೂ ಈಗ ಇಲ್ಲೆ. ಆರ್ಥಿಕ ಆಗಿ ಜನಂಗಳ ಜೀವನ ಮಟ್ಟ ಮೇಲೆ ಏರಿಕಂಡ್ ಇದ್ದ್ ಹಾಂಗೆ, ಸೌಕರ್ಯಗ ಹೆಚ್ ಆತಿದ್ದ ಹಾಂಗೆ ದಿನೋಳೂ ಹಬ್ಬನೇತೇಳುವ ಪರಿಸ್ಥಿತಿ ಇಂದ್ ಉಟ್ಟು. ಹಾಂಗಾಗಿ ಹಬ್ಬಗಳ ಬಗ್ಗೆ ಕಾತರ ನಿರೀಕ್ಷೆ ಇಲ್ಲದಾಂಗೆ ಆಗಿ ಹುರ್ಪು ಕಮ್ಮಿ ಆಕಂಡ್ ಉಟ್ಟು. ದಿನೋಳು ಬಗೆ ಬಗೆ ತಿಂಡಿ ತೀರ್ಥ ತಿಂದ್‌ಕಂಬ ಹಾಂಗೆ ಇರ್‌ಕನ ಹಬ್ಬಕ್ಕೇ ಕಾಯುವ ಕಾತರ ಎಲ್ಲಿ ಇದ್ದದೆ?

ಹೀಂಗಿದ್ದರೂ ಅಲ್ಲಿ ಇಲ್ಲಿ ಹಬ್ಬಗಳ ಪುನಶ್ಚೇತನದ ಪ್ರಯತ್ನಗ ಆಕಂಡ್ ಇರ್ದರ ಕಾಣಕ್. "ಆಟಿಡೊಂಜಿ ದಿನ" ದಂತ ಕಾರ್ಯಕ್ರಮಗ ತುಳುನಾಡ್‌ನ ಸಂಪ್ರದಾಯ, ಊಟ ತಿನ್‌ಸ್, ಬೆಳೆ ಬಾಗ್ಯಗಳ್‌ಂದ ಮನ್‌ಸ್ ಮುಟ್ಟುದರಕಂಡವೆ. ಸುಳ್ಯ ಈ ಕಡೆ ನಡ್ಸುವ ಬೊಲೇಂದ್ರನ ಅಲಂಕಾರ ಮಾಡುವ ಸ್ಪರ್ದೆ ದೀಪಾವಳಿ ಆಚರ್ಣೆಗೆ ಕಾಯಕಲ್ಪ ಕೊಟ್ಟದೆ. ನಾಡ ಹಬ್ಬ ಮೈಸೂರು ದಸರಾ ಸ್ಥಳೀಯ ಆಗಿ ಆಚರ್ಸುವ ಕ್ರಮ ಬಂದ್ ಜನಂಗಳ ಧಾವಂತದ ಬೊದ್ಕಿಗೆ ಒಂದಿಷ್ಟ್ ಸಂಸ್ಕೃತಿನ ಲೇಪ ಮಾಡ್ದೆ. ಕೃಷ್ಣಾಷ್ಟಮಿ, ನಾಗರ ಪಂಚಮಿ, ಹುತ್ತರಿ, ಕೈಲ್‌ಪೊದುನಂತ ಹಬ್ಬಗ ಜನರ್ಲಿ ಮತ್ತೆ ಮತ್ತೆ ಉತ್ಸಾಹ ಮೂಡ್ಸಿವೆ. ದೇವಸ್ಥಾನಗಳ್ಲಿ, ಚರ್ಚ್‌ಗಳ್ಲಿ ಬತ್ತದ ಕದ್‌ರ್‌ನ ಕೊಡುವ ಸಂಪ್ರದಾಯ ಬೆಳ್ಕಂಡ್ ಇದ್ದ್ ಹೊಸ ಅಕ್ಕಿನ ಊಟ ಉಂಬ "ಹೊಸ್ತು" ಹಬ್ಬ ಅಲ್ಲಲ್ಲಿ ಜಾರಿಲಿ ಉಟ್ಟು.

ಆರ್ಥಿಕ ಆಗಿ, ವೈಜ್ಞಾನಿಕ ಆಗಿ, ತಾತ್ವಿಕ ಆಗಿ ದೇಶ ಎಷ್ಟೇ ಮುಂದುವರ್ದರೂ ಅದ್ರೊಂದು ಸಾಂಸ್ಕೃತಿಕ ಪ್ರಭಾವಳಿ ಇಲ್ಲದಿದ್ದರೆ ಆ ದೇಶಕ್ಕೆ ಘನತೆ ಇಲ್ಲೆ. ಹಬ್ಬಗ ಆ ಸಾಂಸ್ಕೃತಿಕ ಪ್ರಭಾವಳಿನ ಕುಸುರಿ ಕಲೆಗ. ಈ ಕಲಾ ವೈಭವ ಒಳಿಯೊಕು. ಅದ್ಕಾಗಿ ಹಬ್ಬಗಳ ಅರ್ಥಪೂರ್ಣ ಆಗಿ ಆಚರ್ಸೊಕು.

✍ಲೀಲಾ ದಾಮೋದರ

**ಚಿಂತನೆ – 2**

# ಅನ್ಮನ ದೊಡ್ಡ ಕಾಯಿಲೆ

ರಾಮ ರಾವಣರ ಯುದ್ಧ ನಡ್ದ್ ರಾವಣನ ಸಂಹಾರ ಆತ್. ಶಿವಭಕ್ತ, ವೇದ–ವಿದ್ಯಾಪಾರಂಗತ ಬ್ರಾಹ್ಮಣ, ತಂಗೆ ಶೂರ್ಪಣಖಿಗಾದ ಅನ್ಯಾಯಕೆ ಸೀತೆನ ಅಪಹರಣ ಮಾಡ್ದ ತೊಪ್ಪಿಗೆ ಅಂಗದ, ಸುಗ್ರೀವ, ಹನುಮಂತ ವಾನರರ ಉಪಕಾರಂದ ಲಂಕೆ ರಾಮನ ವಶ ಆತ್. ವಿಭೀಷಣಂಗೆ ಒಪ್ಪಿಸಿ ಆತ್. ಅಶೋಕ ವನಂದ ಸೀತೆನ ಬುಡ್ಗಡೆ ಆತ್. ರಾಮ ಲಕ್ಷ್ಮಣರ ಒಟ್ಟಿಗೆ ಸೀತೆ ಅಯೋಧ್ಯೆಗೆ ಹೊರ್ಟದೆ.

ಆದರೆ ರಾಮನ ಮಾತ್ ಎಲ್ಲವರ ಬೇಜರಲಿ ಮುಳ್ಗ್‌ಸಿತ್. ಮರ್ಯಾದಾ ಪುರುಷೋತ್ತಮ ರಾಮ ಹೇಳ್ದೆ:

ಸೀತೆ ರಾವಣನ ವಶಲಿ ಇದ್ದವಳು. ರಾವಣನ ಕೊಂದ್ ಅವಳ ಬುಡ್ಸಿಕಂಡ್ ಬಂದೆ. ನನ್ನ ಕೆಲ್ಸನ ನಾ ಮಾಡ್ದೆ. ಈಗ ಸೀತೆಗೆ ಇಷ್ಟ ಬಂದಲಿಗೆ ಹೋಗ್‌ವಷ್ಟ್ ಹಕ್ಕ್ ಉಟ್ಟು. ರಾಮನ ಮಾತ್ ಕೇಳಿ ಸೀತೆ ನಿನ್ನ “ಧರ್ಮಪತ್ನಿ” ನಿಂಗೆ ಹದಿನಾಲ್ಕ್ ವರ್ಷ ವನವಾಸ ಆಗ್‌ವರೆಗೆ ನಿನ್ನ ಒಟ್ಟಿಗೆನೇ ಇತ್ತ್. ಈಗ ನಿನ್ನೊಟ್ಟಿಗೆ ಅಯೋಧ್ಯೆಗೆ ಕರ್ಕಂಡ್ ಹೋದಿಯಾ? ಕೇಳ್ತ್ ಸುಗ್ರೀವ.

ಇಲ್ಲೆ ನನ್ನೊಟ್ಟಿಗೆ ಬರುವಾಂಗೆ ಇಲ್ಲೆ. ರಾವಣನ ವಶಲಿದ್ದ ಅವಳ ಮೇಲೆ ಜನ ಅನ್ಮನ (ಸಂಶಯ) ಪಟ್ಟವೆ. ರಾಮನ ಮಾತ್ ಕೇಳಿ ಬೇಜರಲಿ ಮುಳ್ಗಿದ ಸೀತೆ ಅಗ್ನಿಪ್ರವೇಶ ಮಾಡಿ ಪತಿವ್ರತೆತೇಳ್‌ವಂತದರ ತೋರ್ಸಿಕೊಟ್ಟದೆ. ಮತ್ತೆ ಅಯೋಧ್ಯೆ ಪ್ರಜೆ ಒಬ್ಬನ – ಅನ್ಮನದ ಮಾತ್‌ಂದ ತುಂಬಿದ ಬೊಸುರಿ ಹೆಂಗ್‌ಸ್‌ನ (ಸೀತೆ) ಕಾಡಿಗೆ ಕಳ್ಸಿತ್ ರಾಮ. “ಲೋಕಮಾತೆ” ಹೇಳ್ಸಿಕಂಡ ಸೀತೆನ ಬೊದ್ಕು ಕಷ್ಟದ ಕಡೆಗೆ ಜಾರ್ದ್. ಹಿಂಗೆ ಅನ್ಮನಲಿ ಸಿಕ್ಕಿ ಹಾಕಂಡ ಮನ್ಸ್‌ಗ ಕಡ್‌ಮೂರ್ಖರ್ ಆಗಿದ್ದವೆ. ಗಂಡ–ಹೆಣ್ಣ್‌ನ ಮೇಲೆ, ಹೆಣ್ಣ್–ಗಂಡನ ಮೇಲೆ ಅನ್ಮನ ಪಡ್ದು ಅವರ ಜೀವನಲಿ ನರ್ಕಪ್ರಾಯ ಆಗಿದ್ದದೆ. ಕಡೆಗೆ ಕೋರ್ಟ್‌ಲಿ ಗಂಡ–ಹೆಣ್ಣ್‌ನ ಬುಡ್ಗಡೆ ಆದೆ.

ಇದ್ಕೆಲ್ಲ ಕಾರಣ ಅನ್ಮನ ತೇಳ್‌ವ ದೊಡ್ಡ ರೋಗ. ಇಲ್ಲದ ಸಲ್ಲದ ಕಾರಣಗಳ ಸಂಬಂಧಗಳ ಘಟನೆಗಳ ನೆನ್ಸಿ ಸಾಕ್ಷಿಗಳ ಸೇರ್ಸಿ ಅವರವರ ಒಳೆಗೆ ಹೊಡ್ದಾಟ, ಜಗಳ, ಗಂಡ–ಹೆಣ್ಣ್‌ಗೆ, ಹೆಣ್ಣ್ ಗಂಡಂಗೆ ನರ್ಕ ಕೊಡ್ದು ದಿನಂದ ದಿನಕ್ಕೆ ಜಾಸ್ತಿ ಆಗ್ತ ಉಟ್ಟು.

ಅಪ್ಪ–ಅಮ್ಮ ಬೆಳಿವ ಮಕ್ಕಳ ಮೇಲೆ ಅನ್ಮನ ಪಟ್ಟವೆ. ಹೊರೆಗೆ, ಕಾಲೇಜ್‌ಗೆ

ಹೋಗಿ ಬಾಕನ ಹೊತ್ತ್ ಆದರೆ ಮಗಳ ನಡ್ತೆ ಮೇಲೆ ಅನ್ಮನ. ಮಂಜ ಜೋಸ್ತಿಗಳ ಸಂಗ ಮಾಡಿಟು. ಲಾಯ್ಕ್ ಓದಿದೆನಾ ಇಲ್ಲೆನ ಕುಡ್ದದೆನಾ. ನಾವ್ಗೆ ಪ್ರಾಯ ಆದ ಮೇಲೆ ನಮ್ಮ ಸಾಂಕಿದೆನಾ ಇಲ್ಲೆನಾ ಅನ್ಮನ ಪಟ್ಟವೆ.

ಹಿಂಗೆ ಮಕ್ಕಳ ಮೇಲೆ ಅನ್ಮನ ಪಡುದರ್‌ಂದ ಅಪ್ಪ-ಅಮ್ಮ ಮಕ್ಕಳ ನೆಡುಲಿ ಇರುವ ಪ್ರೀತಿ ಹಳ್ಸಿ ಗೊಬ್ಬರ ಆಕೆ ಕಾರಣ ಅನ್ಮನ ತೇಳ್‌ವ ದೊಡ್ಡ ಕಾಯಿಲೆ.

ಇನ್ನ್ ಕೆಲ್ಸದ ಬಗ್ಗೆ ಹೇಳಿರೆ ಮೇಲ್ ಅಧಿಕಾರಿಗಳ ಮೇಲೆ ಅನ್ಮನ, ಒಟ್ಟಿಗೆ ಕೆಲ್ಸ ಮಾಡವರ ಮೇಲೆ ಅನ್ಮನ, ಕೈ ಕೆಳಗೆ ಕೆಲ್ಸ ಮಾಡವರ ಮೇಲೆ ಅನ್ಮನ, ಒಟ್ರಾಸಿ ಯಾರ ನಂಬುದು ಯಾರು ನಂಬಿಕೆ ಆಗದ್‌ತೇಳ್‌ವ ಅನ್ಮನ ಯಾರ್ ನಂಗೆ ಬೇಡದ ಹೆಸ್ರ್ ತಂದವೆ, ಯಾರ್ ನನ್ನ ಚಾಡಿ ಮಾತಾಡುವೆತೇಳ್‌ವ ಅನ್ಮನ. ಹಿಂಗೆ ಇರವರ ಮನ್ಸ್‌ಗೆ ಎಲ್ಲಿಟು ಕುಸಿ?

ಈ ಅನ್ಮನ ಕೆಲವರ ನೆತ್ತಿಗೇರಿ ಕಾಯಿಲೆ ಬರ್‌ವಷ್ಟಕ್ಕೆ ತಲ್ಪಿದೆ ಈ ಅನ್ಮನ.

ಅನ್ಮಲಿ ಹೊತ್ತ್ ಕಳೆತಾ ಒಳೊ. ಯಾರ ಕೂಡ ನಂಬಿಕೆ ಆದುಲೆ. ನಾ ಒಬ್ಬನೇ ಸರಿ ಒಳ್ದವ್ ಯಾರೂ ಸರಿ ಇಲ್ಲೆ. ತಿಳ್ಕಂಬವ್ ಒಳ. "ತಾನೂ ಕಳ್ಳ, ಪರರ ನಂಬ" ತೇಳ್‌ವ ಗಾದೆನ ಹಂಗೆ.

ಇನ್ನ್ ಕಾಯಿಲೆನ ಬಗ್ಗೆ ಅನ್ಮನ ಪಡವ್ ಒಳೊ.

ಡಾಕ್ಟ್ರ ಸರಿ ಮೊದ್ದು ಮಾಡುವೆನಾ, ಕಾಯಿಲೆ ಯಾವೂದ್ ಸರಿಯಾಗಿ ಹೇಳ್‌ವೆನಾ ಇಲ್ಲೆನ, ದುಡ್ಡು ತಿಂಬಕೆ ನಾವ್ಗೆ ಮೋಸ ಮಾಡುವೆನಾ, ನಮ್ಮ ಕಾಯಿಲೆ ಗುಣ ಆದೆನ ಇಲ್ಲೆನ ಅನ್ಮನ. ಈ ಅನ್ಮನದ ಚಕ್ರವ್ಯೂಹದ ಒಳೆಗೆ ಸಿಕ್ಕಿ ಕಾಯಿಲೆಂದ ಅನ್ಮನಗಳೇ ಹೆಚ್ಚಿ ಆಗಿ ನರ್ಲ್‌ತಾ ಒಳೊ! ಇದ್ಕೆ ತೆಲುಗುಲಿ "ಅನುಮಾನಂ ಪೆದ್ದ ರೋಗಂ" ತೇಳ್‌ವ ಗಾದೆ ಹುಟ್ಟಿಟು!

ಈ ಅನ್ಮನ ಅರ್ಥಂಬರ್ಥ ತಿಳ್‌ವಳಿಕೆ, ಅಜ್ಞಾನ, ತಪ್ಪ್ ಗ್ರಹಿಕೆ, ಬೇರೆವರ ಚಾಡಿ ಮಾತ್‌ಗಳ್‌ಂದ ಹುಟ್ಟಿಕಂಡದೆ.

ಅದ್ಕೆ "ಪ್ರತ್ಯಕ್ಷ ಕಂಡರು ಪ್ರಮಾಣಿಸಿ ನೋಡು"ತೇಳ್‌ವ ಗಾದೆನ ನೆನ್ಸಿ ನಾವ್ಗೆ ಹಕ್ಕಲೆ ಇರ್‌ವರ ಒಟ್ಟಿಗೆ ಹೇಳಿ ಅದ್ಕೆ ಪರಿಹಾರನ ತಕಣೊಕು. ಯಾರ್ ಕೂಡ ಯಾವಾದರ್‍ೂ ಮುಚ್ಚಿ ಇಸಿಕೆ ಆಗದ್. ಅನ್ಮನ ಜಾಸ್ತಿ ಆಕನ ಕಾಯಿಲೆನ ಹಂತಕೆ ಬಾಕನ ಮನೋವೈದ್ಯನ ಸಹಾಯ ಪಡ್ಕಣೊಕು. ಇದರ್‌ಂದ ಅನ್ಮನತೇಳ್‌ವ ದೊಡ್ಡ ಕಾಯಿಲೆ ದೂರ ಆದೆತೇಳ್‌ವ ನಂಬಿಕೆ ಇಸಿಕಣೊಕು.

"ನಂಬಿಕೆಯೇ ಜೀವನದ ನೆಲೆಗಟ್ಟು. ನಂಬಿದರೆ ದೇವರು ನಂಬದಿದ್ದರೆ ಬರಿ ಕಲ್ಲು" ಹೌದಲ್ಲಾ?

✍ಉದಯಕುಮಾರಿ ಚೆಂಬು,

ಪುಸ್ತಕ ವಿಮರ್ಶೆ 

# ಕೊಡಗು ಗೌಡ ಸಮುದಾಯ ಸಾಂಸ್ಕೃತಿಕ ಅನನ್ಯತೆ

ಡಾ. ಕೋರನ ಸರಸ್ವತಿಯವರ 'ಕೊಡಗು ಗೌಡ ಸಮುದಾಯ ಸಾಂಸ್ಕೃತಿಕ ಅನನ್ಯತೆ'ಂತೇಳುವ ಸಂಶೋಧನಾತ್ಮಕ ಕೃತಿ, ಅರೆಭಾಷೆ ಗೌಡ ಸಮುದಾಯದ ಸಂಸ್ಕೃತಿ, ಸಂಪ್ರದಾಯ, ಆಚರಣೆ, ಪದ್ಧತಿ ಇವುಗಳ ಕೂಲಂಕಷ ವಿವರಗಳೊಟ್ಟಿಗೆ ವಿಶಿಷ್ಟವಾಗಿ ಮೂಡಿಬಂದುಟು. 2008 ಲ್ಲಿ ಅಧ್ಯಯನ ಬರಹ ಲೋಕಾರ್ಪಣಗೊಂಡರು ಪ್ರಸ್ತುತ ದಿನಗಳವರೆಗೆಸ ಗೌಡ ಅರೆಭಾಷೆನ ಸಾಂಸ್ಕೃತಿಕ ಅನನ್ಯತೆನ ಬಗ್ಗೆ ಇಷ್ಟು ವಿವರಣೆನ ಬೇರೆ ಕೃತಿ ಬಾತ್ಲೆ ಎಂಬುದು ಅತಿಶಯೋಕ್ತಿ ಅಲ್ಲ. ಪ್ರಕಟ ಆದ ಮೇಲೆ ಇಂದ್‌ನವರೆಗೆ 2010 ರಲ್ಲಿ ಮತ್ತೆ 2016ರಲ್ಲಿ ಮುದ್ರಣಗಳ ಕಂಡ್, ಪ್ರಸಕ್ತ ದಿನಗಲ್ಲಿ ಸ ಕೊಡಗ್‌ಲಿ ಗೌಡ ಸಮುದಾಯದ ಪರಂಪರೆನ ಓದಿಕಂಬ ಆಸಕ್ತಿ ಇರ್ವ ಜನಂಗ ಈ ಪುಸ್ತಕನ ತಕಂಬತಿರ್ದು ಇದಿಕ್ಕೆ ಸಾಕ್ಷಿ. ಈ ಕೃತಿನ ಸಂಪೂರ್ಣ ಓದಿಕಾನ ನಮ್ಮ ಅರೆಭಾಷೆ ಗೌಡ ವಲಯದ ಸಾಂಸ್ಕೃತಿಕ ವೈಭವ ಇಷ್ಟು ಶ್ರೀಮಂತಿಕೆಲಿ ಉಟ್ಟಾಂತ ನಾವುಗೆ ಆಶ್ಚರ್ಯ ಆದೆ. ಸರ್ವ ವಿಚಾರಗಳ ಸಂಪೂರ್ಣ ಜ್ಞಾನ ಮತ್ತೆ ಅನುಸರಿಸಿಕೆ ವಿಧಾನಗ ನಾವುಗೆ ಒಂದೇ ಕೃತಿಲಿ ಸಿಕ್ಕಿದೆ. ಬಳಿಗಳ ಬಗ್ಗೆ ಹೇಳಿಕಾನ ಪ್ರತಿ ಬಳಿಯ ಹಿನ್ನೆಲೆ, ಅದ್ ಹೆಂಗೆ ಆಚರಣೆಗೆ ಬಾತ್ ಎಂಬುದರ ವಿವರ ಓದಿಕಾನ ಕೃತಿಯ ಅಧ್ಯಯನ ಶೀಲತೆಗೆ ಜೀವಂತಿಕೆ ಮತ್ತ್ ತೀವ್ರತೆ ನಮ್ಮರಿವಿಗೆ ಬಂದದೆ. ಯಾವುದೇ ಪೂರ್ವಾಗ್ರಹ ಇರದೆನೆ ಈ ಕೃತಿನ ಓದಿದ ನಂಗೆ ಅಭೂತಪೂರ್ವ ಜ್ಞಾನ ಲಭಿಸಿತ್.

ಯಾವುದೇ ಜನಾಂಗದ ಸಂಪ್ರದಾಯದ ಬೇರ್ ಇರ್ವ ಜಾಗಂತ ಹೇಳ್ರೆ ಅದ್ ಹಳ್ಳಿ, ಇಂಥ ಪ್ರದೇಶಂದ ಸಾಮಾಜಿಕ, ಸಾಂಸ್ಕೃತಿಕ ಅನನ್ಯತೆನ ಅಧ್ಯಯಿಸಿ ದಾಖಲೀಕರಣ ಮಾಡ್ದುಂತ ಹೇಳ್ರೆ ಅದ್ ಹೋರಾಟ. ಈ ಕೃತಿಲಿ ಕೊಡಗ್ ಗೌಡ ಸಮುದಾಯದ ಉದ್ದೇಶ ಮತ್ತೆ ವ್ಯಾಪ್ತಿ, ಕೊಡಗ್ ಗೌಡ ಸಮುದಾಯದ ಭೌಗೋಳಿಕ ನೆಲೆ, ಸಾಮಾಜಿಕ ನೆಲೆ, ಕೊಡಗ್ ಗೌಡರ ಆಹಾರ ಪದ್ಧತಿ ಮತ್ತೆ ಜೀವನ ಕ್ರಮ, ಕೊಡಗ್ ಗೌಡರ ಜಾನಪದ ಜಗತ್ತ್, ಕೊಡಗ್ ಗೌಡ ಸಮುದಾಯದ ಸಾಂಸ್ಕೃತಿಕ ಅನನ್ಯತೆ ಮತ್ತು ಚಲನಶೀಲತೆ ಇವಿಷ್ಟ್ ಅಂಶಗಳ ದಾಖಲಿಸ್ಯೊಳ. ಆದರೆ ಸಂಸ್ಕೃತಿನ ಬೆಳವಣಿಗೆಂತ ಹೇಳ್ರೆ ಅದ್ ಚಲನಶೀಲತೆ, ಸಾಂಸ್ಕೃತಿಕ ಅಂಶಗಳಾದ ನಂಬಿಕೆಗ ಒಂದೇ ಸಮುದಾಯದವರ್ಲಿಸ ಭಿನ್ನವಾಗಿದ್ದದೆ. ಆದಂರ್ದ ಇಂಥ ನಿರಂತರ ಪ್ರಕ್ರಿಯೆನ ಸಂಸ್ಕೃತಿನ ಇನ್ನು ಅಧ್ಯಯನ ಮಾಡಿ

ಹೊಸ ರೂಪದ ಇನ್ನೊಂದು ಕೃತಿನ ಲೇಖಕಿಯವರ್ಲಿ ನಾವು ನಿರೀಕ್ಷಿಸುವೆ.

ಇಲ್ಲಿನ ಕೃತಿಲಿ ಲೇಖಕಿಯವು ಹೇಳುವಂಗೆ ವ್ಯಕ್ತಿ ಮತ್ತು ಸಮಾಜ ಪರಂಪರಾಗತವಾಗಿ ಒಪ್ಪಿಕಂಡ್ ಅನುಸರ್ಸಿಕಂಡ್ ಬರುವ ವರ್ತನೆಗಳ ನಾವ್ ನಂಬಿಕೆಗಳ್‌ಂತ ಕರ್ದವೆ. ಕೊಡಗ್ ಗೌಡ್ರ್‌ಗ ತಮ್ಮದೆ ಆದ ಕೆಲವ್ ನಂಬಿಕೆಗಳ ಇಸಿಕಂಡಳೊ. ಒಂದು ಜನಾಂಗದ ಒಟ್ಟು ಧೋರಣೆಗೆ ಪೂರಕವಾಗಿನೆ ನಂಬಿಕೆಗ ಹುಟ್ಟಿಕಂಡಿದಂರ್ದ, ಜನಾಂಗದ ಸಂಸ್ಕೃತಿನ ನಂಬಿಕೆಗೆ ಪ್ರದರ್ಶಿಸುವೆ. ನಂಬಿಕೆ ಸಂಸ್ಕೃತಿನ ಮೂಲ ಬೇರ್ ಇದ್ದ ಹಂಗೆ. ಇವ್ ಕೊಡಗ್ ಗೌಡ್ರ ಎಲ್ಲ ನಂಬಿಕೆಗಳ ಕಾರ್ಯಕಾರಣನ ಗ್ರಹಿಸುದು ಕಷ್ಟ ಆದರುಸ, ಅವುಗ ಗೌಡರ ನಿತ್ಯ ಜೀವನಲಿ ಸೇರಿ ಹೋಗಿಟು. ಆದಂರ್ದ ಗೌಡ ಸಮುದಾಯದ ನಂಬಿಕೆಗಳ ಆ ಪ್ರದೇಶದ ಸಂಸ್ಕೃತಿಗೆ ಸಂಬಂಧಿಸಿ ಹೇಳಕ್. ಜನರ ನಂಬಿಕೆಗೆ ತಮ್ಮ ಸಮುದಾಯದ ಸಾಂಸ್ಕೃತಿಕ ವಲಯನ ಇನ್ನ್ ಗಟ್ಟಿಗೊಳ್ಸಿದೆ.

ಕರ್ನಾಟಕದ ಬೇರೆ ಕಡೆಗಳ್ಲಿಸ ಗೌಡ ಸಮುದಾಯ ಇದ್ದರುಸ ಒಂದ್ ಪ್ರದೇಶದ ಒಳಗಡೆ ವಾಸಿಸುವ ಸಮುದಾಯ ತನ್ನ ಸಾಂಸ್ಕೃತಿಕ ಅಸ್ಮಿತೆನ ಎತ್ತಿ ಹಿಡ್ದದೆ. ಇಂತಹ ಸಮುದಾಯದ ಒಳಗೆ ಹೋಗಿ ಅಧ್ಯಯಿಸಿ ಬರೆದರಂದ ಲೇಖಕಿಯವರ ಜ್ಞಾನ ಎಷ್ಟು ವ್ಯಾಪಕವಾದದ್ ಎಂಬುದು ನಾವುಗೆ ತಿಳ್ದದೆ. ಅಲ್ಲದೆ ಪ್ರತಿ ವಿಚಾರನ್ನಸ ವಸ್ತುನಿಷ್ಠವಾಗಿ ಗ್ರಹಿಸಿದ ಮತ್ತ್ ಸಂಗ್ರಹಿಸಿದ ದೃಷ್ಟಿಕೋನವೊಂದ್ ನಮ್ಮರಿವಿಗೆ ಬಂದದೆ. ಅರೆಭಾಷೆಯ ಪರಿಸರದಲ್ಲಿ ಬದುಕುತ್ತಿರುವ ನಮಗೆಲ್ಲ ಕೊಡಗಿನ ಗೌಡ ಸಮುದಾಯ ತನ್ನದೆ ಆದ ವೈಶಿಷ್ಟ್ಯಯಗಳನ್ನು ಹೇಗೆ ಪರಂಪರಾಗತವಾಗಿ ಉಳ್ಸಿಕೊಂಡ್ ಬಂದುಟು ಎಂಬುದರ ಸ್ಥೂಲ ವಿವರಣೆ ಸಿಕ್ಕಿದೆ. ಇದ್ ಗೌಡ ಸಮುದಾಯಲಿ ವಾಸಿಸ್ತ ಯುವ ಜನಾಂಗಕ್ಕೆ ತೀರಾ ಅವಶ್ಯಕ. ಒಟ್ಟಿನಲ್ಲಿ ಈ ಕೃತಿ ಅರೆಭಾಷೆನ ಗೌಡ ಸಮುದಾಯಕ್ಕೆ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವಲಯಲಿ ತುಂಬ ಮನ್ನಣೆ ದೊರಕಿಸುವಂತ ಕೃತಿ. ಗೌಡ ಸಮುದಾಯ ಮಾತಾಡುವಂತ ಅರೆಭಾಷೆ ಕನ್ನಡದ ಒಂದು ಸಾಮಾಜಿಕ ಉಪಭಾಷೆ ಎಂಬುದರ ವಿದ್ವಾಂಸರ್‌ಗ ಈಗಾಗಲೆ ಖಚಿತಪಡಿಸ್ಯೊಳ. ಈ ಭಾಷೆ ಮಾತಾಡುವರ ಸಂಸ್ಕೃತಿನ ಉಳ್ಸುದುಂತ ಹೇಳ್ರೆ ಭಾಷೆನ ಉಳ್ಸಿದಂಗೆ. ಈ ನಿಟ್ಟ್‌ಲಿ ಈ ಕೃತಿ ಮಹತ್ವವಾಗಿ ಕೊನೆವರೆಗೆ ಉಳ್ಕಂಡದೆ.

ಜಾನಪದದ ಕುರ್ತು ಹೇಳುದಾದ್ರೆ ಮನುಕುಲ ಪಡ್ದ ಅನುಭವಗಳ, ಕಲ್ತ ಆಚರಣೆಗಳ ಒಟ್ಟು ಗ್ರಹಿಕೆ. ಲೇಖಕಿಯವರ ಆಸಕ್ತಿದಾಯಕ ಕ್ಷೇತ್ರನೆ ಜನಪದ ಕಾರ್ಯಗ ಆಗಿರ್ವಂತದ್ದ್, ಅವು ಜಾನಪದದ ಕುರ್ತ್ ಬರ್ದದರ ಓದಿಕಾನ ನಮಗನಿಸಿದೆ ಮತ್ತ್ ಇಂತಹ ಮಹತ್ವದ ಕೃತಿ ಬರೆಯಕೆ ಪ್ರೇರಣೆನು ಜನಪದನೆ

ಎಂಬುದು ಸ್ಪಷ್ಟ ಆದೆ. ಕೃತಿನ ಉದ್ದೇಶ ಮತ್ತ್ ವ್ಯಾಪ್ತಿ ಅಧ್ಯಾಯಲಿ ಜನಪದದಷ್ಟ್ ವಿಶಾಲಸ, ವ್ಯಾಪಕಸ ಆದ ಇನ್ನೊಂದು ಪದವಿ ಇಲ್ಲೆಂತ ಕಂಡದೆ. ಹರಿಯ ಬಸಿರಲ್ಲಿ ಬ್ರಹ್ಮಾಂಡ ಅಡ್ಗಿದಂಗೆ ಜನಪದದ ಕುಕ್ಷಿಯಲ್ಲಿ ಜಗತ್ತೆಲ್ಲ ಹುದ್ಗಿಟು. ಜನಪದ ಆದಿ ಅಂತ್ಯ ಇಲ್ಲದೆ ಗುಪ್ತಗಾಮಿನಿಯಾಗಿ ಸಂಸ್ಕೃತಿಯೊಟ್ಟಿಗೆ ಹರ್ದ್ ಬರ್ತುಟ್ಟು. ಹಳೆಯ ತಲೆಮಾರು ತಾನು ಪರಂಪರೆಂದ ಪಡ್ದ ಸಮಸ್ತ ಅನುಭವನ ಮುಂದಿನ ಪೀಳಿಗೆಗೆ ಧಾರೆ ಎರೆವಲ್ಲಿ ಜೀವನದ ಎಲ್ಲ ಸ್ತರಗಲ್ಲಿಸ ಜಾನಪದ ಪ್ರತಿಫಲಿತ ಆದೆ. ಕಾಲ ಕಾಲದ ಜನಜೀವನ ಮತ್ತ್ ಸಂಸ್ಕೃತಿನ ಸರಿಯಾದ ರೀತಿಲಿ ಅರ್ಥಮಾಡಿಕಂಬಕೆ ಜಾನಪದ ಸಹಾಯ ಮಾಡ್ದೆ. ಹಿಂಗಿರಿಕಾನ ಒಟ್ಟಾರೆ ಜನಪದಂತ ಹೇಳ್ದು ಮನುಷ್ಯನ ಸಾಂಸ್ಕೃತಿಕ ವಲಯಲಿ ಭಾರಿ ಮಹತ್ವದ ವಿಷ್ಯ. ಲೇಖಕಿಯವರ ದೀರ್ಘಕಾಲದ ಜಾನಪದ ಅಧ್ಯಯನವೆ ಇಂತದೊಂದು ಕೃತಿನ ಹುಟ್ಟಿಗೆ ಕಾರಣ ಅಂತ ಹೇಳಕ್. ಜಾನಪದ ಲೋಕಲಿ ದಣಿವರಿಯದೆ ಅಡ್ಡಾಡಿಕೊಂಡಿದ್ದರೆ ಅದ್ ಕೊಡುವ ಜ್ಞಾನ ಎಂಥ ಕೃತಿನ ಬರಿಸುವಂಥ ಶಕ್ತಿ ಕೊಟ್ಟದೆ.

ಈ ಕೃತಿನ ತುಂಬ ಅತ್ಯಮೂಲ್ಯವಾದ ಮಾಹಿತಿಗ ಸಿಕ್ಕುವೆ. ಆಚರಣೆನ ಹಿಂದೆನ ಚರ್ಚೆಗಳಿಗೆ ಇಲ್ಲಿ ಉತ್ತರ ಸಿಕ್ಕಿದೆ. ನಮ್ಮ ಕಾಲದ ಅಗತ್ಯಗಳಿಗೆ ಅಗತ್ಯವಾದ ವಿಶ್ಲೇಷಣೆಗ ಉಟ್ಟು. ಯಾವುದೇ ವಿಚಾರಗಳ ಕುರಿತಾದರು ಅನಗತ್ಯ ಹೇರಿಕೆ ಇಲ್ಲಿಲ್ಲೆ. ಮಾಹಿತಿಗಳ ಕುರ್ತಾದ ಅತಿರಂಜಿತ ವೈಭವೀಕರಣ ಇಲ್ಲಿ ಕಾಂಬದ್ಲೆ. ಅರೆಭಾಷೆ ಗೌಡ ಸಮುದಾಯದವ್ಕೆ ಇದ್ ಅಪೂರ್ವವಾದ ಆಕರ ಗ್ರಂಥ. ಇದು ಒಂದು ಸಾಹಿತ್ಯ ಕೃತಿನ ಹಂಗೆನೆ ಓದುಗರಿಗೆ ಸುಲಭವಾಗಿ ದಕ್ಕಿದೆ ಎಂಬುದರ ಅನುಭವ ನನಗಾಗಿಟು. ಈ ಕೃತಿನ ಓದುದರಂದ ಅನೇಕ ಮೂಢನಂಬಿಕೆಗಳಂದಲು ಸುಲಭಲಿ ಪಾರಾಕ್. ಯಾಕೆಂತ ಹೇಳ್ರೆ ವಿಜ್ಞಾನ ಹೇಳುವ ಸತ್ಯನ ಒಂದು ಚೌಕಟ್ಟಿನೊಳಗಿಸಿ ವಿವರಿಸಿದ ರೀತಿ ಎಂತವರಿಗು ಅರ್ಥ ಆದೆ. ಒಟ್ಟ್‌ಲಿ ವಿಸ್ತಾರದ ಕಾರ್ಯಕ್ಷೇತ್ರಲಿ ಕೊಡಗ್‌ನ ಗೌಡ ಸಮುದಾಯದ ಸಾಂಸ್ಕೃತಿಕ ಒಳನೋಟನ ಅತ್ಯಂತ ಪರಿಣಾಮಕಾರಿಯಾಗಿ ತೆರೆದಿಸಿದ ಲೇಖಕಿಯವರ ಶ್ರಮ ಸಾರ್ಥಕ.

✍ಸಂಗೀತ ರವಿರಾಜ್

මනೆ ಮದ್ದ್

# ತುಳಸಿಯ ಮಹತ್ವ

ತೊಳ್ಸಿ ಗಿಡ ಎಲ್ಲರ ಮನೆ ಮುಂದುಗಡೆ ಇರುದು ಒಂದು ಸಂಪ್ರದಾಯ.

ತೊಳ್ಸಿ ಗಿಡಲಿ 2 ವಿಧ ಉಟ್ಟು.

ಒಂದನೇದು ರಾಮ ತೊಳ್ಸಿ, ಎರಡನೇದು ಕೃಷ್ಣ ತೊಳ್ಸಿ,

ರಾಮ ತುಳಸಿ, ಇದರದು ಬಣ್ಣ ತಿಳಿ ಹಸಿರಾಗಿದ್ದದೆ.

ಕೃಷ್ಣ ತುಳಸಿ, ಇದರದು ಬಣ್ಣ ಕಪ್ಪು ಮಿಶ್ರ ಆಗಿದ್ದದೆ.

ತುಳಸಿ ಗಿಡದ್ ಎಲೆನ ಪೂಜೆಗೆ ಮತ್ತೆ ಮಾಲೆ ಮಾಡಿ ದೇವರಿಗೆ ಹಾಕುವೆ. ಗಣಪತಿ ದೇವರಿಗೆ ತುಳಸಿ ವಿರೋಧ ಆಗಿದ್ದದೆ. ಇದರ ಬದಲಿಗೆ ಗರಿಕೆ ಕೊಡಿನ ಇಸುವೆ. ಇದ್ ಗಣಪತಿಗೆ ತುಂಬಾ ಶ್ರೇಷ್ಠ.

ತುಳಸಿ ಗಿಡಗಳನ್ನ ತುಳಸಿ ಕಟ್ಟೆ ಒಳಗೆ ಶನಿವಾರ ದಿನ ನೆಡ್ವ ಕ್ರಮ ಎಲ್ಲವುಕೆ ಗೊತ್ತಿರುದು ಸರ್ವೇ ಸಾಮಾನ್ಯ. ತುಳಸಿ ಗಿಡನ ಒಳ್ಳೆ ದಿನ ನೋಡಿ ಶುದ್ಧ ಮುದ್ರಿಕೆಲಿ ನೆಡ್ವ ಸಂಪ್ರದಾಯ ಉಟ್ಟು. ತುಳಸಿ ಕಟ್ಟೆಲಿ ದೀಪ ಇಸಿಕೆ ಒಂದು ಸ್ಥಳ ಇದ್ದದೆ. ಅದರಲಿ ದೀಪ ಇಸಿಬುಟ್ಟು ದಿನಾ ಬೆಳಿಗ್ಗೆ ಮೀದು ಒಂದು ಒಂದು ಚೊಂಬು ನೀರ್ ತಕಂಡ್ ತುಳಸಿ ಕಟ್ಟೆಗೆ ಪ್ರದಕ್ಷಿಣೆ ಬಂದ್ ಸೂರ್ಯ ನಮಸ್ಕಾರ ಮಾಡ್ವ ಕ್ರಮಸ ಉಟ್ಟು.

ತುಳಸಿ ಗಿಡನ ನಾಡ್ ಕಡೆ ಅಂಗಳಲಿ ತುಂಬಾ ನೆಟ್ಟು ಕಂಡಿದ್ದವೆ. ಮನೆ ಅಂಗಳಲಿ ನೆಟ್ಟ ಒಂದು ಗಿಡಂದ ನೂರಾರ್ ಬೀಜಗ ಒಣಗಿ ಬಿದ್ದ್ ಮಳೆಗಾಲಲಿ ನೂರಾರ್ ಗಿಡ ಹುಟ್ಟಿ ಬೆಳ್ದವೆ. ತುಳಸಿ ಗಿಡದ್ ಗಾಳಿ ಸೇವನೆ ಮಾಡ್ರೆ ಮೊನ್ನಂಗೆ ಭಾರೀ ಒಳ್ಳೆದು. ಆರೋಗ್ಯಕ್ಕೆ ವಿಶೇಷ ಪರಿಣಾಮ ಬೀರಿದೆ.

ತುಳಸಿ ಗಿಡಗಳುಂದ ಮನೆ ಮೊದ್ದು ಕೂಡ ಮಾಡ್ವೆ, ಸಣ್ಣ ಮಕ್ಕಳಿಗೆ ಶೀತ ಕೆಮ್ಮು ಬಂದರೆ ಕೃಷ್ಣ ತುಳಸಿ ಗಿಡ (ಕಪ್ಪು ತುಳಸಿ)ದ್ದು ಎಲೆನ ತಂದ್ ಅರ್ದ್ ರಸ ತೆಗ್ದ್ ಅದ್ಕೆ ಶುಂಠಿರಸ ಮತ್ತೆ ಕಾಳು ಮೆಣ್ಸಿನ ಹೊಡಿ ಜೇನ್ ಸೇರ್ಸಿ ಕೊಟ್ಟರೆ ಒಳ್ಳೆದಾದೆ. ಈ ಮೊದ್ದ್‌ನ 4–5 ದಿನ ಕೊಟ್ಟವೆ.

ಗಿಡ ಮೂಲಿಕೆಗಳುಂದ ಮಾಡ್ದ ಮೊದ್ದು (ಆಯುರ್ವೇದಿಕ್)ಲಿ ತುಳಸಿಯ ಪಾತ್ರ ತುಂಬಾ ವಿಶೇಷತೆ ಹೊಂದಿಟ್ಟು, ಸಣ್ಣ ಮಕ್ಕಳಿಗೆ ಜ್ಞಾಪಕ ಶಕ್ತಿ ಬಾಕೆ

ಹೊತ್ತಾರೆ ಎದ್ದಂಗೆ ತಿಮರೆ (ಒಂದೆಲಗ) ಸೊಪ್ಪುನ ಕೊಟ್ಟ ಹಂಗೆ ತುಳಸಿ ಸೊಪ್ಪುನಸ ಕೊಟ್ಟರೆ ಒಳ್ಳೆದ್. ನೀರ್‌ಗೆ ತುಳಸಿ ಸೊಪ್ಪು ಹಾಕಿ ಮೀದರೆ ಮೈಲಿದ್ದ ದುರ್ಗಂಧ ಹೋದೆ. ದೀಪಾವಳಿ ಹಬ್ಬದ ಸಮಯಲಿ ತುಳಸಿ ಪೂಜೆ, ಗೋಪೂಜೆ, ಲಕ್ಷ್ಮೀಪೂಜೆ, ಅಂಗಡಿ ಪೂಜೆ ಮಾಡ್ವ ಕ್ರಮ ರೂಢಿಯಾಗಿ ಬಂದುಟು.

ಕಡೇದಾಗಿ ಮೊನ್ಸನ ಬಾಳನೌಕೆಲಿ ಬೇಕಾದಷ್ಟು ಸುಖ ದುಃಖಗಳುಂದ ಬಾಳಿ ಬೊದುಕಿ ಒಂದಲ್ಲ ಒಂದು ದಿನ ಇಹಲೋಕನ ತ್ಯಜಿಸಿ, ಪರಲೋಕಕ್ಕೆ ಹೋಗುವ ಸಮಯ ಒದಗಿ ಬಂದದೆ. ಅಂಥ ದಿನಲಿ ನಮ್ಮ ಗೌಡ ಸಂಸ್ಕೃತಿಲಿ ತೀರಿ ಹೋದವರ ಅಂತ್ಯಕ್ರಿಯೆ ಮಾಡ್ವ ಸಮಯಲಿ ತುಳಸಿ ಕೊಡಿನ ತಂದ್ ಕಂಚಿನ ಬಟ್ಟಲುಲಿ ಹಸುನ ಹಾಲ್ ಹಾಕಿ ತುಳಸಿ ಕೊಡಿಂದ ಬಂದ ಜನ ಎಲ್ಲವೂ ಬಾಯಿಗೆ ನೀರ್ ಕೊಟ್ಟ್ ಅವರ ಅಂತ್ಯದರ್ಶನ ಪಡ್ಕಂಡವೆ.

ಶ್ರಾವಣ ಶನಿವಾರಲಿ ಒಪ್ಪೊತ್ತ್ ನಿಂತವು ಕತ್ತಲೆಗೆ ಮೀದು ಬಂದು
ಅಂಗಳಲಿ ಮೂಡಾ ದಿಕ್ಕಿಗೆ ಸರಿಯಾಗಿ ಆಕಾಶ ನೋಡಿ
ನಕ್ಷತ್ರಕ್ಕೆ ಕೈ ಮುಗ್ದ್ ತುಳಸಿ ಗಿಡಕ್ಕೆ ನೀರ್ ಬುಟ್ಟು ಸ್ವಲ್ಪ ನೀರ್ ಕುಡ್ದವೆ
ಒಪ್ಪೊತ್ತು ನಿಂತವರ ಕ್ರಮ ನೀರ್ ಕುಡ್ದಾಕನ ಮುಗ್ದದೆ.

✍ಎಂ. ವಿ. ಮೋಹನ್ ಕುಮಾರ್

* ಆನೆ ಹೇಳ್ತ್ ನಾನೇ ಮೇಲು, ಪಿಜಿನ್ ಹೇಳ್ತ್ ನಾನೇ ಮೇಲು, ಕುಂಡತ ಹೇಳ್ತ್ ಅವವ್ಕೆ ಅವವೇ ಮೇಲು.
* ಎಸಂಡ್‌ಗೆ ನೆಟ್ಟಂಗೆ ನಡೆಕೆ ಗೊತ್ತ್‌ಲೆ.
* ಹಂಡೆಗೆ ಮುಚ್ಚೊಳ ಉಟ್ಟು, ದೊಂಡೆಗೆ?
* ಬೆತ್ತಲಿ ಹೊಡೆದು ಸುಲಭ, ಕಡೆದು ಕಷ್ಟ.
* ಮೀನಿಗೆ ರೆಪ್ಪೆ ಇಲ್ಲೆ, ಮೊಸಳೆಗೆ ನಾಲಿಗೆ ಇಲ್ಲೆ.

✍ಸಂ.

# ಲಾವಂಚದ ಮಹತ್ವ

ಹಿಂದೆನ ಕಾಲಲಿ ಅಜ್ಜಿ ಮುತ್ತಜ್ಜಿಕಳ ಹಕ್ಕಲೆ ಇದ್ದ ಬೆಲೆ ಬಾಳುವ ಸಾಮಾನ್‌ಗಳ ರೇಷ್ಮೆ ಸೀರೆಗಳನ್ನ ಕಪಾಟ್‌ಲಿ ಇಲ್ಲರೆ ಕಬ್ಬಿಣದ ಪೆಟ್ಟಿಗೆಲಿ ಜೋಕೆಲಿ ಇಸ್‌ತಿದ್ದೊ. ವೊರ್ಷಕ್ಕೊಂದು ರೇಷ್ಮೆ ಸೀರೆ ಹಕಂಡರೆ ಅದ್ ಬಾಳ ಸಂಗತಿ ಆಗಿತ್ತ್. ಈ ಕಾರಣಂದ ಅದರ ಅಷ್ಟೇ ಜೋಕೆಲಿ ಕಾಪಾಡಿಕಂಡ್ ಇಸ್‌ತಿದ್ದೊ. ಸೀರೆ ಹಾಳಾಗದಂಗೆ ಪೆಟ್ಟಿಗೆ ಅಲ್ಲರೆ ಕಪಾಟ್‌ನೊಳಗೆ ಎಕ್ಕಳೆ (ಜಿರಲೆ) ಸೇರದಂಗೆ ಲಾವಂಚದ ಬೇರ್‌ನ ಬಿಳಿ ಅರಿವೇಲಿ ಗಂಟ್‌ಕಟ್ಟಿ ಇಸ್‌ತಿದ್ದೊಂತ ನನ್ನ ಅವ್ವ ಹೇಳ್‌ತಿದ್ದೊ. ಲಾವಂಚದ ಗಮಲ್‌ಗೆ (ಪೊರ್ಮಳಕೆ) ಎಕ್ಕಳೆ ಕಾಟ ಇರ್‌ತಿತ್ತ್‌ಲೆಂತಾ ನನ್ನ ಅವ್ವ ಹೇಳ್‌ತಿದ್ದೊ.

ಪೊರ್ಮಳದ ಎಣ್ಣೆ ಮಾಡಿಕೆನೂ ಲಾವಂಚಲಿ ತುಂಬಾ ಮೊದ್ದ್‌ನ ಗುಣ ಉಟ್ಟು. ಇದ್ ಹಳ್ಳ, ಕೆರೆ, ಚೋಡಿಗಳ ಪುಡೆಲೀ ಹೆಚ್ಚಾಗಿ ಬೆಳ್‌ದದೆ. ಲಾವಂಚಕ್ಕೆ ಮೊಣ್ಣ್ ಕೊರ್ದ್ದೊದರ ತಡೆವ ಸಕ್ತಿ ಹೆಚ್ಚಾಗಿರುದರ್‌ಂದ ಇದರ ಬರೆ ಪುಡೆಗಳ ಇಳ್‌ಜಾರ್‌ಲಿ ನೆಟ್ಟ್ ಬೆಳ್ಸವೆ. ಇದ್ ಮಳೆ ನೀರ್ ಹರ್‌ದ್ ಹೋದರ್‌ನ್ನಾ ತಡ್‌ದದೆ.

ವೆಟಿವೇರ್ ಹುಲ್ಲು, ಮಡಿವಾಳ ಬೇರ್, ರಾಮಂಚ ಹೇಳಿ ಕರ್‌ಸಿಕಂಬಾ ಲಾವಂಚದ ವೈಜ್ಞಾನಿಕ ಹೆಸ್‌ರ್ ವೆಟವೇರಿಯಾ ಜಿಜನಿಯೋಡೆಸ್. ಲಾವಂಚಲಿ ನೀರ್‌ನ ಸುದ್ದ ಮಾಡುವ ಸತ್ವ ಇರ್‌ದರ್‌ಂದ ಕುಡಿಯುವ ನೀರ್‌ನ ಹೂಜಿ, ಜಗ್ಗ್‌ಗಳಿಗೆ ಇದರ ಬೇರ್‌ನ ಹಾಕಿ ಇಸಕು. ಇದ್‌ರ್‌ಂದ ನೀರ್ ಸುದ್ದ ಆದೆ. ಅಲ್ಲದೆ ಕುಡಿಯಕೆ ಒಳ್ಳ ಪೊರ್ಮಳ ಇದ್ದದೆ. ಇದ್ ಗೊತ್ತಿರುವವು ಅರ್ಗ್ಗಾಲಲಿ ಇದರ ಬೇರ್‌ನ ತೊಳ್‌ದ್ ಒಣ್‌ಂಗಿಸಿ ಇಸಿಕಂಡವೆ. ಅಲ್ಲದೆ ನೀರ್‌ಗೆ ಹಾಕಿ ಕುಡಿಯಕೆ ಇಸಿಕಂಡವೆ.

ಲಾವಂಚದ ಬೇರ್‌ಂದ ಮಾಡ್‌ದ ಎಂಣೆನ ಮೈ ಕೈಗೆ ಪೂಜಿವೆ. ಅಲ್ಲದೆ ಬೇರ್‌ನ ನೀರ್‌ಲಿ ಹಾಕಿ ಲಾಯಿಕ ಕೊದ್ಸ್ ಆರ್‌ಸಿ ಕುಡ್‌ದರೆ ಹುಳ ಬಾಧೆನ ತಡಿಯಕ್. ವಾತಕ್ಕೂ ವಳ್ಳದ್, ನಂಜ್ ಇಳ್ಸಿದೆ. ಲಾವಂಚಕ್ಕೆ ಬೇನೆನ ತಡೆವ ಸಕ್ತಿ ಉಟ್ಟು. ಮುಖ್ಯ ಆಗಿ ನೀರ್‌ನ ಸುದ್ದ ಮಾಡಿಕೆ ಬಳ್‌ಸುವ ಲಾವಂಚಕ್ಕೆ ಪರದೇಸಲಿ ಬಾಳ ಬೇಡಿಕೆ ಉಟ್ಟು. ಆಸ್ಟ್ರೇಲಿಯಾ, ಚೀನಾ, ಥೈಲ್ಯಾಂಡ್, ವಿಯೆಟ್ನಾಂಗಳಲಿ ಲಾವಂಚದ ಬೇರ್‌ನ ಉಪಯೋಗ ಮಾಡುವೆ.

ಆಯುರ್ವೇದಲಿ ಮೊದ್ದ್ ಮಾಡಿಕೆ ಬಳ್‌ಸುವ ಲಾವಂಚಕ್ಕೆ ಪೌರಾಣಿಕ ಹಿನ್ನಲೆ ಉಟ್ಟು. ಲಾವಂಚಕ್ಕೆ ರಾಮಚಂದ್ರ ಹೆಸರ್ ಶ್ರೀ ರಾಮಚಂದ್ರಂದ ಬಾತ್‌ಂತ ಪುರಾಣಲಿ ಹೇಳ್‌ದೆ. ಶ್ರೀ ರಾಮಚಂದ್ರ ವನವಾಸಲಿ ಇರಿಕಾಕನ ಕುಡಿವ ನೀರ್‌ನ ಸುದ್ದ ಮಾಡಿಕೆ ಲಾವಂಚದ ಬೇರ್‌ನ ಉಪಯೋಗ ಮಾಡ್‌ತಿದ್ದ ಕಾರಣ "ರಾಮಂಚ" ಹೆಸರ್ ಬಾತ್‌ಂತ ಪುರಾಣಲಿ ಹೇಳಿಟ್ಟು. ಲಾವಂಚದ ತೈಲನ ಮೊದ್ದ್ ಅಲ್ಲದೆ ಸಾಬಾನ್, ಸಿಂಗಾರದ ಸಾಧನಗ, ಊದುಬತ್ತಿ ಮಾಡಿಕೆ ಬಳ್‌ಸುವೆಂತಾ ಹೇಳ್‌ವೆ. ಅಲ್ಲದೆ ಲಾವಂಚದ ನಾನಾ ನಮೂನೆ ಸಿಂಗಾರದ ಸಾಧನ, ಬೀಸಣಿಕೆ, ಟೊಪ್ಪಿ ಇನ್ನೂ ಏನಾರ್ ಮಾಡಕ್.

✍ಬಿ. ಯಶೋಧ ರಾಘವ

ವರದಿ

# ಅರೆಬಾಸೆ ಇತಿಹಾಸಲಿ ದಾಖಲೆ ನಿರ್ಮಿಸಿದ ಅರೆಬಾಸೆ ಮೊದುವೆ

ಗುತ್ತಿಗಾರು ಕಿರಣ ರಂಗ ಅಧ್ಯಯನ ಸಂಸ್ಥೆ ಅಧ್ಯಕ್ಷ, ಸಾಹಿತಿ, ಸಂಘಟಕ ಯೋಗೀಶ ಹೊಸೊಳಿಕೆ ಮತ್ತೆ ಸುಳ್ಯ ತಾಲೂಕು ಕಚೇರಿಲಿ ಉದ್ಯೋಗದಲ್ಲಿರುವ ಜಯಶ್ರೀ ಮಡಪ್ಪಾಡಿಯವರ ಮೊದ್ವೆ ಏಪ್ರಿಲ್ 28ಕ್ಕೆ ವಳಲಂಬೆ ಶ್ರೀ ಶಂಖಪಾಲ ಸುಬ್ರಹ್ಮಣ್ಯ ದೇವಸ್ಥಾನದ ಸಭಾಭವನಲಿ ಯಾವುದೇ ಗದ್ದಲ ಆಡಂಬರ ಇಲ್ಲದೆ ಶಾಸ್ತ್ರೋಕ್ತವಾಗಿ ನಡ್ತ್.

ಗುತ್ತಿಗಾರು ಕಿರಣರಂಗ ಅಧ್ಯಯನ ಸಂಸ್ಥೆ ಪ್ರಕಟಿಸಿದ ಮೊದುಮಂಜ ಯೋಗಿಶ ಹೊಸೊಳಿಕೆ ಅರೆಬಾಸೆಗೆ ಅನುವಾದ ಮಾಡ್ದ "ಅರೆಬಾಸೆ ಪುಣ್ಯಕೋಟಿ" ಪುಸ್ತಕ ಬೆಳ್ಕಿಗೆ ಬಾತು. ಕರ್ನಾಟಕ ಅರೆಭಾಷೆ ಅಕಾಡೆಮಿ ಅಧ್ಯಕ್ಷ ಪಿ.ಸಿ. ಜಯರಾಮ ಬಿಡುಗಡೆಗೊಳ್ಸಿದೊ. ಪರಶುರಾಮ ಚಿಲ್ತಡ್ಕ, ಕೆ. ಟಿ. ವಿಶ್ವನಾಥ, ಎ. ಕೆ. ಹಿಮಕರ, ದಿನೇಶ ಹಾಲೆಮಜಲು, ಕೇಶವ ಹೊಸೊಳಿಕೆ, ಪದ್ಮನಾಭ, ದಂಬೆಕೋಡಿ, ಮಾಯಿಪನ ಮನೆ ಪುರುಷೋತ್ತಮ, ಮೋನಪ್ಪ ನಾರಾಲು, ಯೋಗೀಶ ಮರಕತ, ಕುಸುಮಾವತಿ ಹೊಸೊಳಿಕೆ, ಪುಂಡರೀಕ ಮಡಪ್ಪಾಡಿ, ದಮಯಂತಿ ಮಡಪ್ಪಾಡಿ ಮಂಟಪಲಿ ಇದ್ದೊ.

ಮತ್ತೆ ಹಿರಿಕಿರಿಯ ಕವಿಗಳಿಂದ ಅರೆಬಾಸೆ ಕವಿಗೋಷ್ಠಿ ನಡ್ತ್. ಹಿಂದೆನ ಮತ್ತೆ ಈಗನ ಮೊದುವೆಗಳ ಬಗ್ಗೆ ಕವನಗ ರಚನೆಯಾಗಿತ್ತು. ಸಾಹಿತಿಗಳಾದ ಬಾಬು ಮಾಸ್ಟರ್ ಅಚ್ಚಲ್ಪಾಡಿ, ಯು. ಸು. ಗೌಡ, ಲಕ್ಷ್ಮಣಗೌಡ ಮಾಯಿಪನ ಮನೆ, ಸಂಜೀವ ಕುದ್ಪಾಜೆ, ಯಶವಂತ ಕುಡೆಕಲ್ಲು, ಪದ್ಯಗಳ ಓದಿರೆ, ಭಾಗ್ಯಶ್ರೀ ಆರ್ನೋಜಿ, ದಿನೇಶ ಹೊಸೊಳಿಕೆ, ರಮೇಶ ಮೆಟಿನಡ್ಕ ಪದ್ಯಗಳ ಹಾಡ್‌ದೊ. ವಕೀಲ, ಸಾಹಿತಿ, ವಿದ್ಯಾಧರ ಬಡ್ಡಡ್ಕ, ಸಮಾರೋಪ ಭಾಷಣ ಮಾಡಿ ಅರೆಬಾಸೆಲಿ ಈ ಮೊದುವೆ ದಾಖಲೆ ಮಾಡಿಟ್ಟು, ಇಂತಹ ಮೊದುವೆ ಅರೆಬಾಸೆ ಉಳ್‌ಸುವಲ್ಲಿ ಯಶಸ್ವಿ ಯಾವುಟ್ಟೂತಾ ಹೇಳ್ದ. ತಬಲಲ್ಲಿ ಹರೀಶ್ ನಾಯಕ್, ಕೀಬೋರ್ಡ್‌ಲ್ಲಿ ಕಡ್ಯ ವಾಸುದೇವ ಭಟ್ ಸಹಕರಿಸಿದೊ.

ಮೊದುವೆ ಕಾಗದನ ಅರೆಬಾಸೆಲಿ ಮಾಡಲಾಗಿದ್ದು, ಮಂಟಪನ ನಮ್ಮ ಸಂಸ್ಕೃತಿಗೆ ಒತ್ತು ಕೊಟ್ಟು ಅರೆಬಾಸೆಲಿನೆ ಹೆಸ್ರುನ ಬರ್‌ದಿದ್ದೊ. ಎಲ್ಲನು ಆಡಂಬರ ಇಲ್ಲದೆ ನಮ್ಮ ಸಂಸ್ಕೃತಿಗೆ ಒತ್ತುಕೊಟ್ಟು ನಡ್ದ ಈ ಮೊದುವೆಲಿ ಸೇರ್ದ ಎರ್ಡ್ ಸಾವಿರಕ್ಕು ಹೆಚ್ಚಿನ ಜನಗಳಿಗೆ ಅರೆಬಾಸೆ ಸಾಹಿತ್ಯ ಸಂಸ್ಕೃತಿನ ತಿಳ್ಸಿಸುವಲಿ ಯಶಸ್ವಿಯಾತ್.

ಪುಸ್ತಕ ಬೆಳ್ಕ್‌ಗೆ ಬಂದ ಒಸಿ ಹೊತ್ತುಲಿ ಒಂದು ಸಾವಿರಕ್ಕು ಹೆಚ್ಚಿಗೆ ಪುಸ್ತಕ ವಿತರಣೆಯಾಗಿ ದಾಖಲೆ ನಿರ್ಮಿಸಿತು. ಒಟ್ಟಾರೆ ಯೋಗೀಶ ಹೊಸೊಳಿಕೆ ಮತ್ತೆ ಜಯಶ್ರೀ ಮಡಪ್ಪಾಡಿಯವರ ಈ ಪ್ರಯತ್ನ ಅರೆಬಾಸೆ ಉಳಿಸಿ ಬೆಳ್ಸ್‌ವಲ್ಲಿ ಯಶಸ್ವಿಯಾಗಿ, ಬೇರೆಯವುಕ್ಕೆ ಮಾದರಿ ಯಾವುಟ್ಟುತ್ತಾ ಹೇಳ್ರೆ ತಪ್ಪಾಕಿಲೆ.

✍ದಿನೇಶ ಹಾಲೆಮಜಲು

| ಹಿಂಗಾರದ ಚಂದಾ ವಿವರ | | |
|---|---|---|
| ಬಿಡಿ ಪ್ರತಿ | ರೂ. | 20–00 |
| ತ್ರೈವಾರ್ಷಿಕ ಚಂದಾ (ಅಂಚೆ ವೆಚ್ಚ ಸೇರಿ) | ರೂ. | 200–00 |
| ಆಜೀವ ಚಂದಾ | ರೂ. | 600–00 |

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ,
ಮಡಿಕೇರಿ – 571 201, ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಗಾದೆ ಗಮ್ಮತ್ತ್ (ಹಿಂದೆನ ಸಂಚಿಕೆಂದ)

324. ಬಾಯಿಗೆ ಕೈ ಹಾಕ್ಬಡ ಸುರಾದು ರಂಪಾಟ.
325. ಸತ್ತಂವ ಎದ್ದ್ ಬಂದಾಂಗೆ
326. ದೈ ಇರ್ಕನ ಬೊಗ್ಗದ್ ಮರ ಆದ ಮೇಲೆ ಬೊಗ್ಗುದಾ?
327. ಹಣ್ಣೆಲೆ ಉದ್ರ್‌ಕನ ಚಿಗ್‌ರೆಲೆ ನೆಗಾಡ್ದೆ.
328. ಕೊತ್ತಿ ಬೀಲಕ್ಕೆ ಬೆಂಕಿ ಹಚ್ಚಿದಂಗೆ.
329. ಕೋಣ್ಸಿದೆ ನೋಡಿ ನಕ್ಷತ್ರಿಕನಂಗೆ
330. ಕುಪ್ಪುಳು ಕಂಣ್ ಚಪ್ಪರ ತಲೆ.
331. ಹಾಡ್ ಹಾಡಿದೆ ಕೋಗಿಲೆ ಹಂಗೆ
332. ಬಿಸಿ ಮಾಡದೆ ಕಬ್ಬಿಣ ಬೊಗ್ಗುದ
333. ಕೋಟೆ ಕಟ್ಟಿದವನೂ ಬದ್ಕಿ ಒಳ್ದದ್ದ್ ಇಲ್ಲೆ.
334. ಮಾಡಿದ ಕರ್ಮ ಕಡೆಮುಟ್ಟ
335. ದೆವ್ವ ಕಂಡ ಕುದ್ಕ ನಂಗೆ
336. ಹಾಳೆಲಿ ಕಲ್ತದ್ ಕೊಳ್ಳಿಲಿ ಮರೆದು.
337. ಮಾವು ಬಿತ್ತಿ ಕೊನಲೆ ಕ್ಯೊದದೆ
338. ನಡುಮನೆ ದೀಪದಂಗೆ
339. ದಾರಂದಲಿ ಇರ್ಸಿದ ದೀಪದಂಗೆ
340. ಮಾತೇ ಮಾಣಿಕ್ಯ.
341. ಕೂಡಿ ಬಾತ್ ಕಂಕಣ ಬಲ.
342. ಹೇನ್ ಇದ್ದವೆ ತೊರ್ಸಿಕಾಂಕೆ ಇಲ್ಲೆ.
343. ದುಡ್ಡು ಇದ್ದಂವ ಮಾತಾಡಿಕೆ ಇಲ್ಲೆ.
344. ಊರಿಗೆ ಅರಸ ಆದರೂ ತಾಯಿಗೆ ಮಂಜನೆ.
345. ಕೈಗೆ ಬಂದ ತುತ್ತು ಬಾಯಿಗೆ ಇಲ್ಲೆ.
346. ಜೇನ್ ತಿಂದ ಕರ್ಡಿ ಉದ್ದಂದ ಬಿದ್ದ ಹಂಗೆ.
347. ಬಂಜೆಗೇನ್ ಗೊತ್ತು ಹೆರಿಗೆ ಬೇನೆ.
348. ಚೆಳ್ಕೆಂಡ್ ಉಟ್ಟು ಕುರೆಮರಿ ಚೆಳ್ಕಂಡಂಗೆ.
349. ಮಾಳಿಂದ ಹೊರ್ಪ ಮುಳ್ಳು ಹಂದಿನಂಗೆ.
350. ಬಿದ್ಕಾಂತ್ ಅಲ್ಲೆ ಹೆಬ್ಬಾವುನಂಗೆ.
351. ಮುಳ್ಳುಲಿ ತೆಗೆದರ ಮೊಚ್ಚಿಲಿ ತೆಗೆವಂಗೆ.

352. ಗೂಡೆಗೆ ಕಣ್ಣ್ ಹಾಕಿಟು ದಂಡ್ ಬಾಕನ ಗೊತ್ತಾದು.
353. ಅಜ್ಜಿನ ಚೆಂಚಿಲಿ ಬಿಡಿಕಾಸ್ ತಪ್ಪಿಕ್ಕಿಲ್ಲೆ.
354. ಹುಲಿಗೆ ಬಾಂಜಾರ ಕೊತ್ತಿಗೆ ಒಲೆ ಚೆಂಟೆ.
355. ಮಾನ ಕಳ್ಕಂಡ್ ಬಂದದೆ ಹಳ್ಳೆನಾಯಿ ಬಂದಾಂಗೆ.
356. ನಾಯಿ ಮೊಲಿಲಿದ್ದ ಹಾಲ್ ನಂಗೆ.
357. ತನ್ನ ಉರ್ಲಿಗೆ ತಾನೆ ಬೀತ್.
358. ಕೂಸುನ ಬುದ್ದಿ ಗಿಣಿ ಬುದ್ದಿ ಇದ್ದಂಗೆ.
359. ಹಗಲಿಡಿ ರಾಮಾಯಣ ಕೇಳಿ ಸೀತೆ ರಾಮಂಗೆನಾಕು ಕೇಳಿದಂಗೆ,
360. ಎಂಕು ಪಣಂಬೂರ್‌ಗೆ ಹೋದಂಗೆ.
361. ಅವ್ವಪ್ಪನ ಜಗಳಲಿ ಕೂಸು ಬಡವಾತ್
362. ಗಿಡ್ಡನ ನೋಡಿ ಕೋಳಿ ಪಿಳ್ಳೆ ಅಮರಿದಂಗೆ
363. ಆಮೆನ ಕಂಡರೆ ಕಡ್ಡವೆಗೆ ಆಕಿಲೆ.
364. ರುಚಿ ಕಂಡ ನಾಯ್ನಂಗೆ.
365. ಬೇಡಿ ತಿಂಬನಕ್ಕಲೆ ಚಿಕ್ಕಾಸ್ ಕೇಳ್ದಂಗೆ.
366. ನಿಧಿ ಮೇಲಿದ್ದ ಹಾವುನಂಗೆ.
367. ಬೆಳ್ದುಟು ಹುತ್ತ ಕೂಡ್ದೆ ಹಾವು.
368. ಕೊಂದುಟು ಕೊತ್ತಿನ ನಡ್ಗಿದೆ ತಲೆ.
369. ಓಟೆ ಹಿಂಡಲಿಗೆ ಕಿಚ್ಚಿ ಕೊಟ್ಟಂಗೆ,
370. ಬೆದ್‌ರ್ ಹಿಂಡಲಿಗೆ ಕಲ್ಲ್ ಇಟ್ಟಂಗೆ,
371. ಸರ್ಪದ ಕೋಪ ಹನ್ನೆರಡ್ ವರ್ಷ.
372. ಹಲ್ಲ್‌ಕಿರ್ದದೆ ಕುರೆನಂಗೆ
373. ವೇದ ಸುಳ್ಳಾದರೂ ಗಾದೆ ಸುಳ್ಳಾಕಿಲೆ
374. ಪ್ರತ್ಯಕ್ಷ ಕಂಡರೂ ಪರಾಂಬರಿಸಿ ನೋಡು
375. ಹುಂಜ ಕೂಂಗ್‌ಕನ ಹೇಂಟೆ ಕಾಂಕ್ರಿಸಿದೆ.
376. ಕಾಡಿಗೆ ಬಿದ್ದ ಕಿಚ್ಚಿನಂಗೆ.
377. ಬೆಂದಷ್ಟ್ ಬೇಯಕ್ಕಿಲ್ಲೆ.
378. ಹಾಲಿಗೆ ಹುಳಿ ಹಿಂಡಿದಂಗೆ
379. ಮೊಸುರುಂದ ಬೆಣ್ಣೆ ತೆಗ್ದಂಗೆ
380. ಮೊಟ್ಟೆಲಿ ಕೋಳಿನ ಹುಡ್ಕಿದಂಗೆ
381. ಕೇರೆ ಹಾವಿಗೆ ಸಿಕ್ಕಿದ ಹೆಗ್ಗಣದಂಗೆ

382. ಕಪ್ಪೆ ಹಾವುನೇ ನುಂಗಿದಂಗೆ,
383. ಹಂಣ್‌ನ ರುಚಿ ತಿಂದವಂಗೆ ಗೊತ್ತು
384. ಕಲ್ಲಡಿಲಿ ಇದ್ದ ಅರೆಂಜನಂಗೆ,
385. ಎಕ್ಕ್ಕತೆಗೆ ಮೊದ್ದು ಕೊಟ್ಟಂಗೆ
386. ಮರದ ಹುಳ ಮರನೇ ಕೊರೆದು.
387. ಭತ್ತದ ರಾಶಿಗೆ ಕೋಳಿ ಬುಟ್ಟ ಹಂಗೆ
388. ಕಷ್ಟ ಬಾಕನ ಕತ್ತೆಕಾಲ್ ಹಿಡ್ದಂಗೆ
389. ಅಕ್ಕಿಂದ ಕಲ್ಲ್ ಹೆಕ್ಕಿದಂಗೆ
390. ದೊಡ್ಡ ಗಾಯಕ್ಕೆ ಬರೆ ಎಳ್ದಂಗೆ
391. ಪಟ್ಟದಾಕೆಗೆ ತನ್ನವರ ಕೊಂದತ್
392. ಇದ್ದದರ ದಾನಕೊಟ್ಟು ಕರ್ಣನೇ ಸತ್ತತ್.
393. ಪಿಜಿನ್‌ಗ್ಯಾಕೆ ಬೇಕು ಆನೆನ ಕೆಲ್ಸ.
394. ಹರ್ಲೆಣ್ಣೆ ಕುಡ್ದವನಂಗೆ
395. ಕೊತ್ತಿ ಬೆಣ್ಣೆ ಪಾಲ್‌ಮಾಡಿದಂಗೆ
396. ಮಡೆತಿಂಬವಂಗೆ ಯಾದಾರೇನ್
397. ಶ್ರೀರಾಮ ಮೆಟ್ಟಿದಕ್ಕೆ ಬಂಡೆಕಲ್ಲ್ ಅಹಲ್ಯ ಆತ್.
398. ಬೆಟ್ಟೆ ಚಿನ್ನವೊ ಒಳ್ಳ ಚಿನ್ನವೊ ಒರೆಕಲ್ಲ್ ತೋರ್ಸಿದೆ.
399. ಕೋಳಿ ಒಟ್ಟೆಗೆ ಕೇಳಿ ಮೆಣ್ಸ್ ಕಡ್ದಂಗೆ.
400. ಗಾಳಿ ಮಾತ್ ಕೇಳಿ ತನ್ನ ಬದ್‌ಕ್ ಹಾಳ್ ಮಾಡ್ಕಾಂತ್
401. ಕಪ್ಪೆ ಉಚ್ಚೆ ಹ್ವೊಯ್ದುಟುಂತೇಳಿ ಇದ್ದ್ ನೀರ್ನ ಸೂಸಿತ್.

(ಮುಂದುವರ್ದದೆ)

✍'ಮಾಲಾಗೌ'

* ಹೇಳ್‌ದ ಮಾತ್ ಗಟ್ಟಿ, ಉಂಡ ಊಟ ಬೂದಿ.
* ಹೂವು ಅರುಳುವ ಸದ್ದ್ ಕೇಳ್ದುಲೆ.
* ಆಕನ ಆದೆ, ಹೋಕನ ಹೋದೆತ್ತೇಳ್‌ರ್‍ರೆ ಹೆಂಗೆ?
* ಓಡ್ದವ್ಕೆಲ್ಲಾ ಇನಾಮು ಸಿಕ್ಕಿದೆನಾ?

✍ಸಂ.

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರಿರ ಜಿ. ಮಾದಪ್ಪ
5 ಬೊಳ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್.ತೇಜ ಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ.ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು

# ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿದ್ ಅಧ್ಯಕ್ಷರ್ ಮತ್ತೆ ಸದಸ್ಯರ ವಿವರ

**ಶ್ರೀ ಪಿ.ಸಿ.ಜಯರಾಮ**
ಅಧ್ಯಕ್ಷರ್
ಬಿನ್॥ ಚಿನ್ನಪ್ಪಗೌಡ
ಪಾಲ್ತಾಡು ಮನೆ, ಮಡಪಾಡಿ ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ 9448625224, 9448528924.

**ಶ್ರೀ ಚಂದ್ರಹಾಸ ರೈ ಬಿ.**
ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಾಹಿತ್ಯ
ಮತ್ತು ಸಂಸ್ಕೃತಿ ಅಕಾಡೆಮಿ,
ಮಡಿಕೇರಿ.

**ಶ್ರೀಮತಿ ಕೆ.ಟಿ.ದರ್ಶನ್**
ಅರ್ಥ ಸದಸ್ಯರು ಮತ್ತು
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ
ಮೊ.ನಂ 9483110593

<u>ಸದಸ್ಯರ್</u>

1. **ಶ್ರೀ ಮಾಧವ ಗೌಡ**
ಕಾಮಧೇನು, ಬೆಳ್ಳಾರೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9448462163

2. **ಶ್ರೀಮತಿ ತಿರುಮಲೇಶ್ವರಿ**
ಕೋಂ: ಲಕ್ಷ್ಮಣ ಗೌಡ
ಅಬರಡ್ಕ ಮನೆ, ಜಾಲ್ಸೂರೂ ಅಂಚೆ
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9901430797

3. **ಶ್ರೀ ಚಿದಾನಂದ ಬೈಲಾಡಿ**
ಬಿನ್ ಬಾಬುಗೌಡ
ವಕೀಲರು, ಪುತ್ತೂರು ಸೆಂಟರ್
ಪುತ್ತೂರು 574201
ಮೊ. ನಂ. 9901430797

4. **ಶ್ರೀ ಯತೀಶ್ ಕುಮಾರ್ ಗೌಡ**
ಬಿನ್:ಮೋನಪ್ಪಗೌಡ
ಸಂಪ್ಯಾಡಿ ಮನೆ
ರಾಮಕುಂಜ ಅಂಚೆ ಮತ್ತು ಗ್ರಾಮ,
ಪುತ್ತೂರು ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9686914166

5. **ಶ್ರೀ ಪರಶುರಾಮ ಚಿಲ್ತಡ್ಕ**
ಬಿನ್ ಚಿನ್ನಪ್ಪಗೌಡ
ಚಿಲ್ಲತ್ತಡ್ಕ ಮನೆ
ನಡಗಲ್ಲು ಅಂಚೆ,ನಾಲ್ಕೂರು ಗ್ರಾಮ
ಸುಳ್ಯ ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9481959171

6. **ಶ್ರೀ ಕೆ.ಟಿ.ವಿಶ್ವನಾಥ್**
ಬಿನ್ ತಿಮ್ಮಪ್ಪಗೌಡ
ಕೈಕುಡಿ ಮನೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ. 9448464593

7. **ಶ್ರೀ ದೇವರಾಜ್ ಬಿ.ಡಿ**
ಬಿನ್ ದಾಮೋದರ
ಬೇಕಳ ಮನೆ, ಕರಿಕೆ ಗ್ರಾಮ, ಮಡಿಕೇರಿ
ಮೊ ನಂ. 9448869861

8. **ಶ್ರೀ ಬಾರಿಯಂಡ ಜೋಯಪ್ಪ**
ಬಾರಿಯಂಡ ಮನೆ
ಮದೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲ್ಲೂಕು
ಮೊ ನಂ. 9481770584

9. **ಶ್ರೀಮತಿ ಕಡ್ಲೇರ ತುಳಸಿ ಮೋಹನ್**
ಬೆಟ್ಟಗೇರಿ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು
ಮೊ ನಂ, 9483110940

10. **ಶ್ರೀಮತಿ ಶ್ವೇತಾ ಮಡಪ್ಪಾಡಿ**
ಮನೆ ನಂ 19/20ಎ, 6ನೇ ಮುಖ್ಯ ರಸ್ತೆ
7ನೆ ಅಡ್ಡರಸ್ತೆ, ಸರಸ್ವತಿ ಪುರಂ, ಮೈಸೂರು-09
ಮೊ ನಂ. 7019188932

11. **ಶ್ರೀ ಎ. ಕೆ. ಹಿಮಕರ**
ಗುತ್ತಿಗಾರು ಅಂಚೆ
ಸುಳ್ಯ ತಾಲ್ಲೂಕು ದ.ಕ 574218
ಮೊ ನಂ 9481267121

12. **ಶ್ರೀ ಪ್ರಸನ್ನ ಕೆ.ಟಿ**
ಬಿನ್: ತಿಮ್ಮಯ್ಯ ಕೆ.ಎ
"ಕಾಫಿಕಳ ಎಸ್ಟೇಟ್ " ಮಕ್ಕಂದೂರು
ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ
ಮೊ ನಂ 9480022923

13. **ಶ್ರೀ ಕೆ.ಎ.ಮೊಣ್ಣಪ್ಪ**
ಬಿನ್: ಅಪ್ಪಚ್ಚ ಕೆ.ಎ
ಬ್ಲಾಕ್ ನಂ 09,"ಕೌಸ್ತುಭ ನಿಲಯ"
ಹೋಟೆಲ್ ಕೂರ್ಗ್ ಇಂಟರ್ ನ್ಯಾಷನಲ್ ಹಿಂಭಾಗ,
ಕಾನ್ವೆಂಟ್ ರಸ್ತೆ ಮಡಿಕೇರಿ.
ಮೊ ನಂ 9844187261

14. **ಶ್ರೀ ಸುರೇಶ್ ಎಂ.ಹೆಚ್**
ಬಿನ್: ಹುಕ್ರಪ್ಪ ಗೌಡ
ಅಮ್ಮೆ, ಮಡಪ್ಪಾಡಿ, ಉಬರಡ್ಕ
ಮಿತ್ತೂರು ಗ್ರಾಮ, ಸುಳ್ಯ
ಮೊ ನಂ 9449387181

15. **ಶ್ರೀ ದಯಾನಂದ ಆಲಿಯಾಸ್ ದಿನೇಶ್ ಹಾಲೆಮಜಲು**
ಬಿನ್: ಯು.ಡಿ.ಮಂಜುನಾಥ ಗೌಡ
ಹಾಲೆಮಜಲು ಮನೆ, ನಾಲ್ಕೂರು ಗ್ರಾಮ
ನಡುಗಲ್ಲು ಅಂಚೆ, ಸುಳ್ಯ, ದ.ಕ
ಮೊ.ನಂ 9448981963, 08257-282179

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸ್ಥರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.

ನೆರಳ್ ಪ್ರತಿ (ಝುರಾಕ್ಸ್)ನ ಸ್ವೀಕರ್ಸುದ್ಲೆ. ಈ ಮೇಲಿನ ಸೂಚನೆ ತಪ್ಪುಬೇಡಿ.

ನಿಮ್ಮ ಬ್ಯಾಂಕ್‌ದ್ ಉಳಿತಾಯ ಖಾತೆ ಸಂಖ್ಯೆ, ಬ್ಯಾಂಕ್ ವಿಳಾಸ, ಐ.ಎಫ್.ಎಸ್.ಸಿ. ಕೋಡ್ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ . ಇ-ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

# ಲೇಖಕರ ಹೆಸ್ರ್ ಮತ್ತೆ ವಿಳಾಸ

| | | |
|---|---|---|
| 1. | ಕೊಟ್ಟಕೇರಿಯನ ಲೀಲಾ ದಯಾನಂದ | ಎಸ್.ಡಿ.ಇ. ಬಿಎಸ್ಎನ್ಎಲ್, 'ಶ್ರೀ ಪೂಜಾ', ಗೌಳಿಬೀದಿ, ಮಡಿಕೇರಿ – 571201 ಮೊ : 9449858586 |
| 2. | ಎಂ. ಜಿ. ಕಾವೇರಮ್ಮ | "ನಿಸರ್ಗ" ಮಾವಜಿ, ಸುಳ್ಯ ದ.ಕ. ಸುಳ್ಯ ತಾಲೂಕು, ದ. ಕ. |
| 4. | ಭವ್ಯಶ್ರೀ ಕರಂಗಲ್ಲು, | ಕರಂಗಲ್ಲು ಮನೆ, ಪಯಸ್ವಿನಿ ಸ್ತ್ರೀಶಕ್ತಿ ಮಹಿಳಾ ವಿವಿದೊದ್ದೇಶ ಸಹಕಾರ ಸಂಘ, ಸುಳ್ಯ. |
| 5. | ಅಂಬೆಕಲ್ಲು ಸುಶೀಲ ಕುಶಾಲಪ್ಪ | ವಿನೋದ್ ಮೆಡಿಕಲ್ಸ್, ಮಡಿಕೇರಿ, ಕೊಡಗು. ಮೊ : 8660647118. |
| 6. | ಕಟ್ರತನ ಕೆ. ಬೆಳ್ಯಪ್ಪ | ಬಲಮುರಿ ಗ್ರಾಮ. |
| 7. | ಭವಾನಿಶಂಕರ್ ಹೊದ್ದೆಟ್ಟಿ | 115, ಬಿ.ಇ.ಎಲ್. ಲೇಔಟ್, ಜಾಲಹಳ್ಳಿ, ಬೆಂಗಳೂರು. |
| 8. | 'ವ್ಯಾಸ' | ಕುಂಞೇಟಿ ಶಿವರಾಮ ಗೌಡ, ಕೊಲ್ಲಮೊಗ್ರ 574218 |
| 9. | ಬೈತಡ್ಕ ಜಾನಕಿ ಬೆಳ್ಯಪ್ಪ | 21–16 ರೇಸ್‌ಕೋರ್ಸ್ ರಸ್ತೆ, ಎಲ್.ಐ.ಸಿ. ಕಚೇರಿ ಹತ್ತಿರ ಮಡಿಕೇರಿ–ಕೊಡಗು ಜಿಲ್ಲೆ. ಮೊ : 9008571899. |
| 10. | ಡಾ। ಜ್ಞಾನೇಶ್ ಎನ್.ಎ. | ನಿಡ್ಯಮಲೆ ಮನೆ, ಪ್ರಾಂಶುಪಾಲರು, ಕೆ.ವಿ.ಜಿ. ಇಂಜಿನಿಯರಿಂಗ್ ಕಾಲೇಜು, ಸುಳ್ಯ, ದ.ಕ. |
| 11. | ಕಾವೇರಿಮನೆ ಡಾ॥ ಕೆ.ಯಂ. ಬೋಜಪ್ಪ, | ನಂ. 22 "ಕಾವೇರಿ" 6ನೇ ಮುಖ್ಯರಸ್ತೆ, ನಾರಾಯಣಪ್ಪ ಬ್ಲಾಕ್, ಆರ್.ಟಿ. ನಗರ, 2ನೇ ಬ್ಲಾಕ್, ಬೆಂಗಳೂರು–560032 ಫೋನ್:08023334111 ಮೊ : 9738450971. |
| 12. | ಲೀಲಾ ದಾಮೋದರ | ಧಾತ್ರಿ, ವಲಯ ಅರಣ್ಯ ಕಚೇರಿ ಹತ್ತಿರ, ಗಾಂಧಿನಗರ, ಸುಳ್ಯ – 574239. |
| 13. | ರವಿ, ಮುಂಗ್ಲಿಮನೆ | ಮೊ : 9482217535. |
| 14. | ಸರೋಜಿನಿ ಗಂಗಯ್ಯ ಎಂ. ಎ. | ಮುಳುಗಾಡು ಮನೆ, ನಿವೃತ್ತರ್, ಸಿಂಡಿಕೇಟ್ ಬ್ಯಾಂಕ್ ವಳಲಂಬೆ, ಗುತ್ತಿಗಾರು ಗ್ರಾಮ ಮತ್ತು ಅಂಚೆ, ಸುಳ್ಯ ತಾಲೂಕು, ಮೊ : 8277201137. |
| 15. | ಎಸ್. ಕೆ. ಈಶ್ವರಿ | ಮೇಕೇರಿ ಗ್ರಾಮ, ಕಗ್ಗೋಡ್ಲು ಅಂಚೆ, ಮಡಿಕೇರಿ – 571201. ಮೊ : 9481370263. |
| 16. | ಹುಲಿಮನೆ ಧನ್ಯಶ್ರೀ ಜೀತ್‌ಕುಮಾರ್ | ಮದೆ ಗ್ರಾಮ & ಅಂಚೆ,ಮಡಿಕೇರಿ– 571201 ಮೊ : 8762817720. |
| 17. | ಸೆಟ್ಟೇಜನ ಗೀತ ಪದ್ಮನಾಭ | ಬಿ. ಬಾಡಗ ಗ್ರಾಮ, ಚೇರಂಬಾಣೆ ಅಂಚೆ, ಮಡಿಕೇರಿ ತಾ॥ ಮೊ : 9483332783 |
| 18. | ಉಮೇಶ ಬಿಳಿಮಲೆ | ಬಿಳಿಮಲೆ ಮನೆ, ಕಲ್ಮಕಾರು ಗ್ರಾಮ, ಸುಳ್ಯ ತಾಲೂಕು. |

| | |
|---|---|
| 19. ಹೊಳೆಕರೆ ಚೆಂಗಪ್ಪ | ಬೆಂಗಳೂರು. |
| 20. ಪಿ. ಜಿ. ಅಂಬೆಕಲ್ | ವಿಶ್ವಾಸ್ ಡ್ಯಾಫೋಡಿಲ್ಸ್ #203, ರಾಮಚಂದ್ರಪುರ, ಜಾಲಹಳ್ಳಿ ಅಂಚೆ, ಬೆಂಗಳೂರು-560013. ಮೊ : 9481390089. ಇ-ಮೇಲ್ : pgambekal@gmail.com |
| 21. ಕೊಟ್ಟಕೇರಿಯನ ಲೀಲಾ ದಯಾನಂದ | ಎಸ್.ಡಿ.ಇ. ಬಿಎಸ್ಎನ್ಎಲ್, 'ಶ್ರೀ ಪೂಜಾ', ಗೌಳಿಬೀದಿ, ಮಡಿಕೇರಿ – 571201 ಮೊ : 9449858586 |
| 22. ಕಾಳೆಂಡ ತಂಗಮ್ಮ ಅಪ್ಪಚ್ಚ | ಬಿಳಿಗೇರಿ. ಮೊ : 9483008653. |
| 23. ಕಟ್ರತನ ಲಲಿತಾ ಅಯ್ಯಣ್ಣ | ಗೌಳಿಬೀದಿ, ಮಡಿಕೇರಿ. |
| 24. ಪ್ರಜ್ವಲ್ ಬೊಳ್ತಾಜೆ | ಬೊಳ್ತಾಜೆ ಮನೆ, ಚೆಂಬು ಗ್ರಾಮ,ಬಾಲಂಬಿ ಅಂಚೆ, ಮಡಿಕೇರಿ ತಾಲೂಕು ಕೊಡಗು ಜಿಲ್ಲೆ– 574234 ಮೊ : 9845787414. |
| 25. ಉದಯಕುಮಾರಿ ಚೆಂಬು, | ಮಾಳಿಗೆಮನೆ, ಎಂ. ಚೆಂಬು, ಬಾಲಂಬಿ ಅಂಚೆ – 574234. ಸುಳ್ಯ, ದ.ಕ. |
| 26. ಸಂಗೀತ ರವಿರಾಜ್ | ಚೆಂಬು, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ. |
| 27. ಎಂ. ವಿ. ಮೋಹನ್ ಕುಮಾರ್ | ಭದ್ರಗೋಳ ಗ್ರಾಮ ಮತ್ತು ಅಂಚೆ, ತಾರಿಕಟ್ಟೆ ತಿತಿಮತಿ. |
| 28. ಬಿ. ಯಶೋಧ ರಾಘವ | ಬಾಳಿಕಲ, ದೇವಿ ಕೃಪಾ, ಸುಳ್ಯ. |
| 29. ದಿನೇಶ ಹಾಲೆಮಜಲು | |
| 30. 'ಮಾಲಾಗೌ' | ಎಂ. ಲಕ್ಷ್ಮಣಗೌಡ, ಮಾಯಿಪನ ಮನೆ, ಮಡಪ್ಪಾಡಿ ಗ್ರಾಮ ಮತ್ತು ಅಂಚೆ, ಸುಳ್ಯ ತಾಲೂಕು, ದ.ಕ ಜಿಲ್ಲೆ. ಮೊ : 9483923310 |














17-2-2019 ರಂದ್ ಸರ್ಕಾರಿ ಪ್ರೌಢಶಾಲೆ, ದುಗ್ಗಲಡ್ಕಲಿ
ನಡ್ದ ಅರೆಬಾಷೆ ಜನಪದ ಆಟಕೂಟದ ಒಂದು ನೋಟ

**HINGARA** Arebhashe Quarterly Volume -3, Issue -10
Date: 30.06.2019 Kodagu KARARB/2016/69571 Price : 20/- Pages : 82













3-3-2019 ರಂದ್ ವೆಂಕಟೇಶ್ವರ ಸಭಾಭವನ ಹಾಲೆಮಜಲುಲಿ
ನಡ್ದ ಅರೆಬಾಷೆ ಸಾಂಸ್ಕೃತಿಕ ಜನಪದ ವೈಭವ

Printed by CHANDRA HASA RAI B. on behalf of Registar, Karnataka Arebhase Samskruthi Mathu Sahitya Academy, and, Published by CHANDRA HASA RAI B. on behalf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : CHANDRA HASA RAI B.